| ಕ್ರ. ಸಂ | ಜಗಳೂರು ಟೌನ್ ವ್ಯಾಪ್ತಿಯ ಬಡಾವಣೆಗಳ ಹೆಸರು | ನಿವೇಶನಗಳ ಪರಿಷ್ಕೃತ ಮೌಲ್ಯ ಪ್ರತಿ ಚದರ ಅಡಿಗೆ | | | |
|---|---|---|---|---|---|
| | | 2011–12 ನಗರ/ಪಟ್ಟಣ/ಪುರಸಭೆ ಪ್ರದೇಶದ ನಿವೇಶನ | | | |
| | | ಪ್ರತಿ ಚದರ ಅಡಿಗೆ | | ಪ್ರತಿ ಚದರ ಮೀಟರ್ | |
| | | ವಾಸೋಪಯೋಗಿ | ವಾಣಿಜ್ಯೋಪಯೋಗಿ | ವಾಸೋಪಯೋಗಿ | ವಾಣಿಜ್ಯೋಪಯೋಗಿ |
| 1 | 2 | 3 | 4 | 5 | 6 |
| 23 | ಜೆ .ಡಿ. ಲೇಔಟ್ | 120 | 300 | 1300 | 2700 |
| 24 | ರಂಗನಾಥ ಬಡಾವಣೆ | 200 | 300 | 2160 | 2700 |
| 25 | ಮಂಜುನಾಥ ಬಡಾವಣೆ | 80 | 300 | 865 | 2700 |
| 26 | ಇಮಾಂ ಬಡಾವಣೆ | 80 | 300 | 865 | 2700 |
| 27 | ಅಶ್ವಥ ಬಡಾವಣೆ | 80 | 300 | 865 | 2700 |
| 28 | ಅಚ್ಚುತ ಬಡಾವಣೆ | 80 | 300 | 865 | 2700 |
| 29 | ತುಮಾಟೆ ಬಡಾವಣೆ | 200 | 300 | 2160 | 5390 |
| 30 | ಚಳ್ಳಕೆರೆ–ಜಗಳೂರು ರಸ್ತೆ (ಮಟ್ಟಿಯಿಂದ ಹಟ್ಟೇರ ಛತ್ರದವರೆಗೆ) | 150 | 300 | 1620 | 3235 |
| 31 | ಜಟ್–ಪಟ್ ನಗರ (ಕೆರೆ ಅಂಗಳ) | 60 | 300 | 650 | 3235 |
| 32 | ಆಯಿಲ್‌ಮಿಲ್ ಹಿಂಭಾಗ | 120 | 300 | 1295 | 3235 |
| 33 | ಬಸವೇಶ್ವರ ಬಡಾವಣೆ | 80 | 300 | 865 | 3235 |
| 34 | ರೆಡ್ಡಿಕೇರಿ ( ಪಶ್ಚಿಮಕ್ಕೆ ) | 100 | 300 | 1080 | 3235 |
| 35 | ಪಟ್ಟಣಶೆಟ್ಟಿ ಕೇರಿ (ಬಸವಣ್ಣ ದೇವಸ್ಥಾನ) | 80 | 300 | 865 | 3235 |
| 36 | ರಂಗನಾಥ ಬಡಾವಣೆ ಹಿಂಭಾಗ | 100 | 300 | 1080 | 3235 |
| 37 | ವಿದ್ಯಾ ನಗರ | 250 | 300 | 2695 | 3235 |
| 38 | ಎನ್.ಜಿ.ಓ.ಬಡಾವಣೆ (ಸರ್ವೆನಂ: 8/ಪಿ) | 80 | 300 | 865 | 3235 |
| 39 | ರಾಜೇಂದ್ರ ಪ್ರಸಾದ್ ರಸ್ತೆ | 120 | 180 | 1295 | 1940 |
| 40 | ಜಿಡ್ಡಿ ಕೇರಿ | 80 | 180 | 865 | 1940 |

| ಕ್ರ. ಸಂ | ಜಗಳೂರು ಟೌನ್ ವ್ಯಾಪ್ತಿಯ ಬಡಾವಣೆಗಳ ಹೆಸರು | ನಿವೇಶನಗಳ ಪರಿಷ್ಕೃತ ಮೌಲ್ಯ ಪ್ರತಿ ಚದರ ಅಡಿಗೆ | | | |
|---|---|---|---|---|---|
| | | 2011–12 ನಗರ/ಪಟ್ಟಣ/ಪುರಸಭೆ ಪ್ರದೇಶದ ನಿವೇಶನ | | | |
| | | ಪ್ರತಿ ಚದರ ಅಡಿಗೆ | | ಪ್ರತಿ ಚದರ ಮೀಟರ್ | |
| | | ವಾಸೋಪಯೋಗಿ | ವಾಣಿಜ್ಯೋಪಯೋಗಿ | ವಾಸೋಪಯೋಗಿ | ವಾಣಿಜ್ಯೋಪಯೋಗಿ |
| **1** | **2** | **3** | **4** | **5** | **6** |
| 41 | ರೀ.ಸರ್ವೆನಂ: 5 ರಲ್ಲಿರುವ ಸೈಟ್‌ಗಳು | 60 | 180 | 650 | 1940 |
| 42 | ರೀ.ಸರ್ವೆನಂ: 7/ಪಿ ರಲ್ಲಿರುವ ಸೈಟ್‌ಗಳು | 70 | 180 | 755 | 1940 |
| 43 | ಎಂ.ಎಂ. ರಸ್ತೆ | 110 | 180 | 1185 | 1940 |
| 44 | ಗಂಗಾಂಭಿಕ ಬಡಾವಣೆ | 150 | 180 | 1620 | 1940 |
| 45 | ಕೆ. ಹೆಚ್. ಬಿ ಕಾಲೋನಿ | 120 | 180 | 1295 | 1940 |
| 46 | ಎಂ.ಜಿ . ಬಸ್ ನಿಲ್ದಾಣ | 300 | 500 | 3235 | 5390 |
| 47 | ಶ್ರೀ ಕೃಷ್ಣ ಬಡಾವಣೆ (ಸರ್ವೆನಂ: 78/1) | 200 | 500 | 2160 | 5390 |
| 48 | ಹೆಚ್.ಡಿ. ದೇವೇಗೌಡ ಬಡಾವಣೆ | 200 | 500 | 2160 | 5390 |
| 49 | ಶ್ರೀರಾಘವೇಂದ್ರ ಬಡಾವಣೆ (ಸರ್ವೆನಂ: 95/2) | 80 | 500 | 865 | 5390 |
| 50 | ದಾವಣಗೆರೆ–ಜಗಳೂರು ರಸ್ತೆಯ ಆಜುಬಾಜು (ಎಂ.ಜಿ.ಬಸ್ ಸ್ಟ್ಯಾಂಡ್ ನಿಂದ ಇಮಾಂ ಸಾಬ್ ಮನೆವರೆಗೆ) | 300 | 500 | 3235 | 5390 |
| 51 | ರೀ.ಸರ್ವೆನಂ: 77/2 ರಲ್ಲಿರುವ ಸೈಟ್‌ಗಳು | 100 | 200 | 1080 | 2160 |
| 52 | ಎಸ್.ಎಸ್.ಬಡಾವಣೆ (ಸರ್ವೆನಂ: 66/1) | 80 | 160 | 865 | 1725 |
| 53 | ರೀ.ಸರ್ವೆನಂ: 77/6 ರಲ್ಲಿರುವ ಸೈಟ್‌ಗಳು | 100 | 200 | 1080 | 2160 |
| 54 | ಅಶ್ವಿನಿ ಬಡಾವಣೆ (ಸರ್ವೆನಂ: 98/1, 98/4 ರಲ್ಲಿನ ಸೈಟ್ ಗಳು ) | 200 | 300 | 1620 | 3235 |
| 55 | ಜೆ.ಬಿ.ಎನ್.ಬಡಾವಣೆ (ಸರ್ವೆನಂ: 21/3) | 70 | 300 | 755 | 3235 |
| 56 | ಶ್ರೀನಿವಾಸಬಡಾವಣೆ (ಸರ್ವೆನಂ: 7/2 ) | 70 | 300 | 755 | 3235 |
| 57 | ಶ್ರೀ ಕೊಟ್ಟೂರೇಶ್ವರ ಬಡಾವಣೆ (ಸರ್ವೆನಂ: 12/1 ) | 100 | | 1080 | |
| 58 | ಜೆ.ಡಿ.ಎಂ.ಸ್ವಾಮಿ ಬಡಾವಣೆ (ಸರ್ವೆನಂ: 20 ರಲ್ಲಿನ ಸೈಟ್‌ಗಳು ) | 100 | – | 1080 | |
| 59 | ಅಬ್ದುಲ್ ಲತೀಫ್ ಬಡಾವಣೆ (ಸರ್ವೆನಂ: 72/1 ) | 65 | 500 | – | – |

**ಟಿಪ್ಪಣಿ**

| | |
|---|---|
| 1 | ಯಾವುದಾದರೂ ಪ್ರದೇಶದಲ್ಲಿ ಫ್ಲಾಟ್‌ಗಳ ದರಗಳನ್ನು ನಿಗಧಿಪಡಿಸಿದ್ದಲ್ಲಿ ಆ ಪ್ರದೇಶಕ್ಕೆ ಹೋಲಿಸಬಹುದಾದ ಫ್ಲಾಟ್‌ಗಳ ದರವನ್ನು ನಿಗದಿಪಡಿಸುವುದು. |
| 2 | ಫ್ಲಾಟ್‌ಗಳಿಗೆ ಸಂಬಂಧಿಸಿದ ಪ್ರತಿಯೊಂದು ಕಾರ್ ಪಾರ್ಕಿಂಗ್ ಮೇಲ್ಛಾವಣಿ ಹೊಂದಿರದ ಪ್ರದೇಶದ ಬೆಲೆ ರೂ. 45,000/– |
| 3 | ಫ್ಲಾಟ್‌ಗಳಿಗೆ ಸಂಬಂಧಿಸಿದ ಪ್ರತಿಯೊಂದು ಕಾರ್ ಪಾರ್ಕಿಂಗ್ ಮೇಲ್ಛಾವಣಿ ಹೊಂದಿರುವ ಪ್ರದೇಶದ ಬೆಲೆ ರೂ. 70,000/– |
| 4 | ಕರ್ನಾಟಕ ಮುದ್ರಾಂಕ ಕಾಯ್ದೆ 1957 ರ ಕಲಂ 45ಎ ವ್ಯಾಪ್ತಿಗೆ ಒಳಪಡುವ ದಸ್ತಾವೇಜುಗಳಲ್ಲಿ ತೋರಿಸಿದ ಕೃಷಿ ಚಟುವಟಿಕೆಗಳಿಗೆ ಬಳಸಲಾಗುವ ಸ್ವತ್ತುಗಳ ಅಳತೆ 10 ಗುಂಟೆಯಿಂದ 13 ಗುಂಟೆಯವರೆಗಿನ ಜಮೀನುಗಳನ್ನು ಆಯಾ ಪ್ರದೇಶಕ್ಕನುಗುಣವಾಗಿ ಗುಂಟೆ ಬೆಲೆಯಲ್ಲಿ ನಿಗದಿಪಡಿಸಲಾಗುವುದು. |
| 5 | ವ್ಯವಸಾಯದ ಜಮೀನುಗಳು ಪರಿವರ್ತನೆಯಾಗಿದ್ದು, ಅಭಿವೃದ್ಧಿ ಹೊಂದದೆ ಇದ್ದು, ಜಮೀನುಗಳ ಬೆಲೆಯನ್ನು ಆಯಾ ಪ್ರದೇಶದ ಜಾಗದ ಬೆಲೆಯ ನಿವೇಶನ ಬೆಲೆಯ ಶೇಕಡ 60 % ಅಥವಾ ಆ ಪ್ರದೇಶದ ಜಮೀನಿನ 3 ಪಟ್ಟು ಯಾವುದು ಹೆಚ್ಚು ಅದು ಬೆಲೆ ನಿರ್ಧರಿಸಿದೆ. |
| 6 | ಮೇಲ್ಕಂಡ ವ್ಯವಸಾಯೇತರ ಉಪಯೋಗದ ಜಮೀನುಗಳನ್ನು / ಸೈಟುಗಳನ್ನು ಹೊರತುಪಡಿಸಿ ಕೈಗಾರಿಕೆ, ಕೋಳಿ ಸಾಕಾಣಿಕೆ, ಹೈನುಗಾರಿಗೆ ಉದ್ದೇಶಕ್ಕಾಗಿ ಉಪಯೋಗಿಸಲ್ಪಡುತ್ತಿರುವ/ಉದ್ದೇಶಿತ/ಪರಿವರ್ತನೆಯಾದ ಜಮೀನುಗಳ ಮಾರುಕಟ್ಟೆ ಬೆಲೆಯನ್ನು ಸದರಿ ಪ್ರದೇಶದಲ್ಲಿರುವ ವ್ಯವಸಾಯದ ಜಮೀನಿನ ಮೂರು ಪಟ್ಟು ಎಂದು ನಿರ್ಧರಿಸಿದೆ. |
| 7 | ಕೈಗಾರಿಕೆ, ಕೋಳಿ ಸಾಕಾಣಿಕೆ, ಹೈನುಗಾರಿಗೆ ಉದ್ದೇಶಕ್ಕಾಗಿ ಉಪಯೋಗಿಸಲ್ಪಡುತ್ತಿದ್ದು ಈಗಾಗಲೇ ಅಭಿವೃದ್ಧಿ ಆಗಿರುವ ಅಂದರೆ ರಸ್ತೆ , ವಿದ್ಯುತ್ ಚ್ಛಕ್ತಿ , ಒಳಚರಂಡಿ, ಮುಂತಾದ ನಾಗರೀಕ ಸೌಲಭ್ಯಗಳನ್ನು ಹೊಂದಿರುವ ಪ್ರದೇಶದಲ್ಲಿ ಇರುವ ಜಮೀನುಗಳ ಮಾರುಕಟ್ಟೆ ಬೆಲೆಯನ್ನು ಸದರಿ ಪ್ರದೇಶದಲ್ಲಿಯ ನಿವೇಶನಕ್ಕೆ ಇರುವ ಚದರ ಅಡಿ ಮೇಲಿನ ಮಾರುಕಟ್ಟೆ ಬೆಲೆಯ ಅರ್ಧದಷ್ಟು ಎಂದು ನಿರ್ಧರಿಸಿದೆ. |
| 8 | ಗ್ರಾಮ ಪ್ರದೇಶದಲ್ಲಿ ಜಮೀನು ರಾಷ್ಟ್ರೀಯ ಹೆದ್ದಾರಿ, ರಾಜ್ಯ ಹೆದ್ದಾರಿ ಹೊಂದಿಕೊಂಡಿದ್ದಲ್ಲಿ , ಸದರಿ ಜಮೀನು ಬೆಲೆಯು ಮಾರುಕಟ್ಟೆ ಬೆಲೆಗಿಂತ ಎರಡರಷ್ಟು ಹೆಚ್ಚಿಗೆ ನಿಗಧಿಪಡಿಸಲಾಗುವುದು. |
| 9 | ಜಗಳೂರು ಟೌನ್ ಬಡಾವಣೆ ವ್ಯಾಪ್ತಿಗೊಳಪಡುವ ಜಮೀನು ದರವನ್ನು ಆಯಾ ಬಡಾವಣೆಯ ನಿವೇಶನದ ಅರ್ಧದಷ್ಟು ಬೆಲೆ ನಿರ್ಧರಿಸಿದೆ. |
| 10 | ಜಗಳೂರು ಪಟ್ಟಣದ ಸ್ಥಳೀಯ ಯೋಜನಾ ಪ್ರದೇಶ ವ್ಯಾಪ್ತಿಯಲ್ಲಿ ಬರುವ ಜಮೀನುಗಳಿಗೆ ಖುಷ್ಕಿ ಜಮೀನಿನ ಎರಡು ಪಟ್ಟು ಬೆಲೆ ನಿಗಧಿಪಡಿಸಿದೆ. ಜಗಳೂರು ಗ್ರಾಮ ಠಾಣ ಪ್ರದೇಶ ಹಾಗೂ ರೀಸರ್ವೆನಂಬರುಗಳ ವಿವರ:– 1 ರಿಂದ 13 ರವರೆಗೆ, 20 ರಿಂದ 24 ರವರೆಗೆ , 51 (ಭಾಗಶ:) 57 ಹಾಗೂ 62 ರಿಂದ 83 ರವರೆಗೆ, 95 , 98, 99, 100 ರಿಂದ 105, 298 ರಿಂದ 301 ರವರೆಗೆ, 313, 379 ರಿಂದ 381 ರವರೆಗೆ ಮತ್ತು 383, 384, 387 ರಿಂದ 395 ರವರೆಗೆ. |
| 11 | ಮೇಲ್ಕಂಡ ಎಲ್ಲಾ ಮಾರ್ಗಸೂಚಿಗಳು ಕರ್ನಾಟಕ ಮುದ್ರಾಂಕ ಕಾಯ್ದೆ 1957 ರ ಕಲಂ 45ಎ, 45ಬಿ ಮತ್ತು ಇತರೆ ಸಂಬಂಧಿಸಿದ ನಿಯಮಗಳು ಸರ್ಕಾರದ ಅಧಿಸೂಚನೆಗಳಿಗೆ ಒಳಪಟ್ಟಿದೆ. |
| 12 | ಬೋರ್ ವೆಲ್ (ಐ.ಪಿ.ಸೆಟ್) ಇದ್ದಲ್ಲಿ ರೂ. 30,000/– ಗಳು ನಿಗದಿಪಡಿಸಿದೆ. |
| 13 | ಮೂಲೆ ನಿವೇಶನಗಳಿಗೆ ಶೇಕಡ 10 % ರಷ್ಟು ಹೆಚ್ಚಿಗೆ ದರ ನಿಗದಿಪಡಿಸಿದೆ. |

Secretary
Jagalur Market Valuation Sub-committee,
Jagalur.

PR-886

## ಸಹಕಾರ ಇಲಾಖೆ

## ಸಹಕಾರ ಸಂಘಗಳ ಸಹಾಯಕ ನಿಬಂಧಕರು (ನಿ. 441) ಹಾಗೂ ವಸೂಲಾಧಿಕಾರಿಗಳು, ಕರ್ನಾಟಕ ರಾಜ್ಯ ಸಹಕಾರ ಪಟ್ಟಣ ಬ್ಯಾಂಕುಗಳ ಮಹಾಮಂಡಳ ನಿ., ಪ್ರಾಂತೀಯ ಕಛೇರಿ, ಹುಬ್ಬಳ್ಳಿ ಇವರ ನಡವಳಿಕೆಗಳು

**ವಿಷಯ :–** ದಿ ಶಿರಸಿ ಅರ್ಬನ್ ಸಹಕಾರಿ ಬ್ಯಾಂಕ ಲಿ., ಶಿರಸಿ ಇವರ ಅಮಲ್ಜಾರಿ ಪ್ರಕರಣ ಸಂಖ್ಯೆ ಸಿಇಪಿ : 6536/09–10 ಸಂಬಂಧಪಟ್ಟಂತೆ ಸ್ಥಿರಾಸ್ತಿಯನ್ನು 1960ನೇ ಸಹಕಾರಿ ಸಂಘಗಳ ನಿಯಮಗಳ ನಿಯಮ 38(6)(ಎ) ರನ್ವಯ ಮಾರಾಟ ಸ್ಥಿರೀಕರಣಗೊಳಿಸುವ ಬಗ್ಗೆ

**ಉಲ್ಲೇಖ :–** 1. ದಾವಾ ಸಂಖ್ಯೆ : ಜೆಆರ್‌ಡಿ: ಯುಬಿಎಫ್ : 3196:2009–10

2. ಅಮಲ್ಜಾರಿ ಸಂಖ್ಯೆ ಸಿಇಪಿ : 6536/09–10

3. ಮಾರಾಟಾಧಿಕಾರಿಯವರ ವರದಿ ದಿನಾಂಕ : 09–05–2011

ದಿ ಶಿರಸಿ ಅರ್ಬನ್ ಸಹಕಾರಿ ಬ್ಯಾಂಕ ಲಿ., ಶಿರಸಿ **ಅವಾರ್ಡುದಾರ**

**ವಿರುದ್ಧ**

ಶ್ರೀ ಚಂದ್ರಕಾಂತ ಕಾಶಿನಾಥ ಮಾಹೇಕರ್,
ಬೇಳಾ ಬಂದರ ರಸ್ತೆ, ಅಂಕೋಲಾ **ತೀರ್ಪು ಬಾಕಿದಾರ**

**ಪ್ರಸ್ತಾವನೆ :**

ಶ್ರೀ ಚಂದ್ರಕಾಂತ ಕಾಶಿನಾಥ ಮಾಹೇಕರ್, ಬೇಳಾ ಬಂದರ ರಸ್ತೆ, ಅಂಕೋಲಾ ಇವರು ದಿ ಶಿರಸಿ ಅರ್ಬನ್ ಸಹಕಾರಿ ಬ್ಯಾಂಕ ಲಿ., ಶಿರಸಿ, ಇದರ ಬಬ್ರುವಾಡಾ ಶಾಖೆಯಿಂದ ದಿನಾಂಕ 03–12–2005 ರಂದು ₹ 8,50,000–00 (₹ ಎಂಟು ಲಕ್ಷ ಐವತ್ತು ಸಾವಿರ ಮಾತ್ರ) ಗಳನ್ನು ಆಸ್ತಿ ಸಾಲ ಪಡೆದು ಬ್ಯಾಂಕಿನ ಸಾಲ ಮಂಜೂರಾತಿಯ ಷರತ್ತು ಮತ್ತು ನಿಯಮಗಳ ಪ್ರಕಾರ ಸಾಲವನ್ನು ಮರುಪಾವತಿಸಲು ವಿಫಲರಾಗಿ ಸುಸ್ತಿದಾರರಾದ ಕಾರಣ ಸಾಲ ವಸೂಲಾತಿಗಾಗಿ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959 ರ ಕಲಂ 71(1)(ಎ) ರನ್ವಯ ಸಹಕಾರ ಸಂಘಗಳ ಜಂಟಿ ನಿಬಂಧಕರು (ನಿ. 441) ದಾವಾ ಪಂಚಾಯ್ತಿ ನ್ಯಾಯಾಲಯ, ಕ.ರಾ.ಸ.ಪ. ಬ್ಯಾಂಕುಗಳ ಮಹಾ ಮಂಡಳ ನಿ., ಪ್ರಾಂತೀಯ ಕಛೇರಿ ಹುಬ್ಬಳ್ಳಿ ಇವರ ನ್ಯಾಯಾಲಯದಿಂದ ಪಡೆದ ದಾವಾ ಸಂಖ್ಯೆ ಜೆಆರ್‌ಡಿ: ಯುಬಿಎಫ್ : 3196:2009–10 ಆದೇಶದನ್ವಯ ದಿ ಶಿರಸಿ ಅರ್ಬನ್ ಸಹಕಾರಿ ಬ್ಯಾಂಕಿನ ಪ್ರಧಾನ ವ್ಯವಸ್ಥಾಪಕರು, ಕರ್ನಾಟಕ ಸಹಕಾರ ಸಂಘಗಳ ನಿಯಮಗಳು 1960 ನಿಯಮ 34(1) ರನ್ವಯ ಸಹಕಾರ ಸಂಘಗಳ ಸಹಾಯಕ ನಿಬಂಧಕರು (ನಿ. 441) ಹಾಗೂ ವಸೂಲಾಧಿಕಾರಿಗಳು, ಕ.ರಾ.ಸ.ಪ. ಬ್ಯಾಂಕುಗಳ ಮಹಾ ಮಂಡಳ ನಿ., ಪ್ರಾಂತೀಯ ಕಛೇರಿ ಹುಬ್ಬಳ್ಳಿ ರವರಲ್ಲಿ ಸಿಇಪಿ ಸಂಖ್ಯೆ : 6536/2009–10 ರಂತೆ ದಾಖಲಾಗಿ ಮುಂದಿನ ವಸೂಲಿ ಕ್ರಮದ ಬಗ್ಗೆ ಅಮಲ್ಜಾರಿ ಅರ್ಜಿಯನ್ನು ಬ್ಯಾಂಕಿನ ಮಾರಾಟಾಧಿಕಾರಿಯವರಿಗೆ ವಹಿಸಲಾಗಿತ್ತು. ಸದರಿ ಮಾರಾಟಾಧಿಕಾರಿಯವರು ಅಮಲ್ಜಾರಿ ಕ್ರಮ ಕೈಗೊಂಡು ಮುಂದಿನ ವಸೂಲಿ ಕ್ರಮಕ್ಕೆ ಸದ್ರಿ ತೀರ್ಪು ಬಾಕಿದಾರನ ಈ ಕೆಳಗೆ ಕಾಣಿಸಿದ ಸಾಲಕ್ಕೆ ಅಡವು ಮಾಡಲ್ಪಟ್ಟ ಸ್ಥಿರಾಸ್ತಿಯನ್ನು ಅಂತಿಮವಾಗಿ ದಿನಾಂಕ 25–02–2011 ರಂದು ಸಾರ್ವಜನಿಕ ಹರಾಜಿಗೆ ತೆಗೆದು, ಸದರಿ ದಿನ ನಡೆಸಿದ ಹರಾಜಿನಲ್ಲಿ ಹನ್ನೆರಡು ಜನ ಬಿಡ್‌ದಾರರು ಭಾಗವಹಿಸಿದ್ದು, ಈ ಪೈಕಿ ಶ್ರೀ ಆದಮ ಅಬ್ದುಲ್ ಖಾದರ ಶೇಖ, ಕಾಕರಮಠ, ಬಬ್ರುವಾಡಾ, ತಾಲೂಕ : ಅಂಕೋಲಾ ಇವರು ₹ 22,15,000/– (₹ ಇಪ್ಪತ್ತೆರಡು ಲಕ್ಷ ಹದಿನೈದು ಸಾವಿರ ಮಾತ್ರ) ಗಳಿಗೆ ಬಿಡ್ಡು ಮಾಡಿ ಅತ್ಯಧಿಕ ಬಿಡ್‌ದಾರರಾಗಿರುತ್ತಾರೆ.

ಡಿಕ್ರಿ ಆದೇಶ ಮತ್ತು ಅಮಲ್ಜಾರಿ ಅರ್ಜಿ ಅನ್ವಯ ಬಾಕಿದಾರನಿಂದ ಶಿರಸಿ ಅರ್ಬನ್ ಸಹಕಾರಿ ಬ್ಯಾಂಕ ಲಿ., ಇವರಿಗೆ ಸದರ್ ಸ್ಥಿರಾಸ್ತಿ ಅಡವು ಮಾಡಿದ ಸಾಲದ ಖಾತೆಗೆ ಹರಾಜು ದಿನಾಂಕದವರೆಗೆ ಅಸಲು, ಬಡ್ಡಿ ಹಾಗೂ ಇತರೇ ಖರ್ಚು ಸೇರಿ ಒಟ್ಟೂ ರಖಂ ₹ 7,92,918–00 ಬ್ಯಾಂಕಿಗೆ ಬಾಕಿ ಬರಬೇಕಾಗಿರುತ್ತದೆ. ₹ 22,15,000–00 ಗಳ ಅತ್ಯಧಿಕ ಬಿಡ್ಡುದಾರರಾದ ಶ್ರೀ ಆದಮ ಅಬ್ದುಲ್ ಖಾದರ ಶೇಖರವರು ಬಿಡ್ಡಿನ ಮೊತ್ತದ ಶೇಕಡಾ 15 ರ ಬಾಬ್ತು ₹ 3,35,000–00 (₹ ಮೂರು ಲಕ್ಷ ಮೂವತ್ತೈದು ಸಾವಿರ ಮಾತ್ರ) ಗಳನ್ನು ಹರಾಜಿನ ಸ್ಥಳದಲ್ಲಿಯೇ ಬ್ಯಾಂಕಿನಲ್ಲಿ ವಸೂಲಾಧಿಕಾರಿಗಳ ಅಮಾನತ ಖಾತೆಗೆ ಪಾವತಿ ಮಾಡಿರುತ್ತಾರೆ. ಉಳಿಕೆ ಬಾಕಿ ಬಿಡ್ ಮೊತ್ತ ₹ 18,80,000–00 (₹ ಹದಿನೆಂಟು ಲಕ್ಷ ಎಂಬತ್ತು ಸಾವಿರ ಮಾತ್ರ) ಗಳನ್ನು ಮತ್ತು ಮುದ್ರಾಂಕ ಶುಲ್ಕ ₹ 1,50,620–00 ಹಾಗೂ ನೋಂದಣಿ ಫೀ ₹ 22,150–00, ಒಟ್ಟೂ ₹ 20,52,770–00 ಗಳನ್ನು ದಿನಾಂಕ 11–04–2011 ರಂದು ಬ್ಯಾಂಕಿನಲ್ಲಿ ವಸೂಲಾಧಿಕಾರಿಗಳ ಅಮಾನತ್ ಖಾತೆಗೆ ಜಮಾ ಮಾಡಿರುತ್ತಾರೆ.

ದಿನಾಂಕ 25–02–2011 ರಂದು ಬಹಿರಂಗ ಹರಾಜು ಮೂಲಕ ಮಾರಾಟ ಮಾಡಿದ ಅಂಕೋಲಾ ತಾಲೂಕ, ಬಬ್ರುವಾಡ ಗ್ರಾಮ, ರೆವಿನ್ಯೂ ಸರ್ವೇ ನಂಬರ್ 387/1 ಅ, ಕ್ಷೇತ್ರ 0–02–04–00 ಹಾಗೂ ಇದರಲ್ಲಿ ಇರತಕ್ಕ ಬಬ್ರುವಾಡ ಗ್ರಾಮ ಪಂಚಾಯತ, ಪಳ್ಳಿಕೇರಿ ವಾರ್ಡಿನ ಆಸ್ತಿ ನಂಬರ್ 669 ರ ಮನೆ ಸಹಿತ ತೀರ್ಪು ಬಾಕಿದಾರನಾದ ಶ್ರೀ ಚಂದ್ರಕಾಂತ ಕಾಶಿನಾಥ ಮಾಹೇಕರ್, ಬೇಳಾ ಬಂದರ ರಸ್ತೆ, ಬಬ್ರುವಾಡಾ, ತಾಲೂಕ : ಅಂಕೋಲಾ ಇವರು ಸಾಲ ಪಡೆಯುವ ಸಂದರ್ಭದಲ್ಲಿ ಡಿಕ್ರಿದಾರ ಬ್ಯಾಂಕಿಗೆ ಅಡವು ಮಾಡಿದಂತೆ ಆಸ್ತಿಯ ರಿಕಾರ್ಡ ಉತಾರ ಮೇಲೆ ಬ್ಯಾಂಕಿನ ಭೋಜಾ ಪ್ರಥಮವಾಗಿ ದಾಖಲಾಗಿದ್ದು ಇರುತ್ತದೆ. ಅಲ್ಲದೇ ಸದರ್ ಆಸ್ತಿಯ ಮೇಲೆ ಸುಪ್ರಭಾತ ಕ್ರೆಡಿಟ್ ಸೌಹಾರ್ದ ಸಹಕಾರ ನಿ., ಅಂಕೋಲಾ ಇವರ ಭೋಜಾ ಸಹ ಇದ್ದು, ಆಸ್ತಿಯ ರಿಕಾರ್ಡ ಉತಾರ ಮೇಲೆ ಭೋಜಾ ದಾಖಲಾಗಿದ್ದು ಇರುತ್ತದೆ. ಸುಪ್ರಭಾತ ಕ್ರೆಡಿಟ್ ಸೌಹಾರ್ದ ಸಹಕಾರ ನಿ.,

ಅಂಕೋಲಾ ಇವರು ತಮ್ಮ ದಿನಾಂಕ 15-04-2011 ರ ಪತ್ರ ನಂಬರ್ 24/11-12 ರಲ್ಲಿ ₹ 8,85,576-00 ನ್ನು ನಮ್ಮ ಸಂಘಕ್ಕೆ ಬಟವಡೆ ಮಾಡಿದಲ್ಲಿ ಭೋಜಾ ಕಡಿಮೆ ಮಾಡಲು ಪ್ರಮಾಣ ಪತ್ರ ನೀಡುವುದಾಗಿ ಒಪ್ಪಿಗೆ ಪತ್ರ ಸಲ್ಲಿಸಿದ್ದು ಸಹ ಇರುತ್ತದೆ.

ಡಿಕ್ರಿಧಾರಕ ಬ್ಯಾಂಕಿಗೆ ಸದರ್ ಹರಾಜಿನ ಬಗ್ಗೆ ₹ 8,429-00 ಖರ್ಚು ತಗುಲಿರುವುದಾಗಿ ಪ್ರಧಾನ ವ್ಯವಸ್ಥಾಪಕರು ತಮ್ಮ ಪತ್ರದಲ್ಲಿ ಮಾಹಿತಿ ನೀಡಿ ಅದನ್ನು ತಮ್ಮ ಬ್ಯಾಂಕಿಗೆ ಹರಾಜಿನಿಂದ ಬಂದ ರಕಮಿನಿಂದ ಬಟವಾಡೆ ಮಾಡಲು ವಿನಂತಿಸಿರುವುದಾಗಿ ಮಾರಾಟಾಧಿಕಾರಿಗಳು ತಮ್ಮ ವರದಿಯಲ್ಲಿ ತಿಳಿಸಿರುತ್ತಾರೆ.

ಸದರ್ ಪ್ರಕರಣದ ಸಾಲದ ಖಾತೆಗೆ 1ನೇ ಜಾಮೀನುದಾರನಾದ ಶ್ರೀ ಕಿರಣ ಮಂಗೇಶ ನಾರ್ವೇಕರ್ ರವರು ತಮ್ಮ ದಿನಾಂಕ 27-04-2011 ರ ಅರ್ಜಿಯಲ್ಲಿ ಮಾನ್ಯ ದಿವಾಣಿ ನ್ಯಾಯಾಲಯ, ಹಿರಿಯ ವಿಭಾಗ, ಕುಮಟಾ ರವರಲ್ಲಿ ದಾವಾ ನಂಬರ್ 5/2011 ದಿನಾಂಕ 23-04-2011 ರಲ್ಲಿ ಮಧ್ಯಂತರ ತಾತ್ಕಾಲಿಕ ಹುಕುಮಿನ ನಕಲನ್ನು ಹಾಜರ್ ಪಡಿಸಿದ್ದು, ಸದರ್ ಹುಕುಮಿನಲ್ಲಿ ತೀರ್ಪು ಬಾಕಿದಾರನಾದ ಶ್ರೀ ಚಂದ್ರಕಾಂತ ಕಾಶಿನಾಥ ಮಾಹೇಕರ್ ಇವರು ಹರಾಜ ರಖಂ ₹ 22,15,000-00 ಗಳಲ್ಲಿ ಹೆಚ್ಚುವರಿಯಾಗಿ ಉಳಿಯುವ ರಕಮಿನಲ್ಲಿ ₹ 5,14,276-00 ಗಳನ್ನು ಪಡೆಯಲು/ಸ್ವೀಕರಿಸಲು ಮಧ್ಯಂತರ ತಾತ್ಕಾಲಿಕ ಹುಕುಂ ಆಗಿದ್ದು ಕಂಡುಬರುತ್ತದೆ. ಆದರೆ ಸದರ್ ವಿಷಯವಾಗಿ ಮಾನ್ಯ ದಿವಾಣಿ ನ್ಯಾಯಾಲಯದಲ್ಲಿ ಬಟವಾಡೆ ಮಾಡದಂತೆ ಯಾವುದೇ ಹುಕುಂ ಮಾಡಿದ್ದು ಇರುವುದಿಲ್ಲ. ಮಾರಾಟಾಧಿಕಾರಿಗಳು ಹೆಚ್ಚುವರಿಯಾಗಿ ಉಳಿಯುವ ಪೂರ್ಣ ರಖಂನ್ನು ಈಗಿರುವ ವಸೂಲಾಧಿಕಾರಿಗಳ ಅಮಾನತ ಖಾತೆಯಲ್ಲಿಯೇ ಮುಂದುವರಿಸಿಕೊಂಡು ಹೋಗುವುದು ಸೂಕ್ತವೆಂತ ತಮ್ಮ ವರದಿಯಲ್ಲಿ ಅಭಿಪ್ರಾಯ ವ್ಯಕ್ತಪಡಿಸಿರುತ್ತಾರೆ.

ದಿ ಶಿರಸಿ ಅರ್ಬನ್ ಸಹಕಾರಿ ಬ್ಯಾಂಕಿನ ಮಾರಾಟಾಧಿಕಾರಿಯವರು ದಿನಾಂಕ 25-02-2011ರಂದು ನಡೆಸಿದ ಸಾರ್ವಜನಿಕ ಹರಾಜನ್ನು ಕರ್ನಾಟಕ ಸಹಕಾರ ಸಂಘಗಳ ಕಾನೂನು ಮತ್ತು ನಿಯಮಗಳನ್ನು ಪಾಲಿಸಿ ಹರಾಜು ಕ್ರಮವನ್ನು ನಡೆಸಿರುವುದಾಗಿ ಹಾಗೂ ಬ್ಯಾಂಕಿನ ಬಾಕಿದಾರರಾದ ಶ್ರೀ ಚಂದ್ರಕಾಂತ ಕಾಶಿನಾಥ ಮಾಹೇಕರ್ ರವರ ಸ್ಥಿರಾಸ್ತಿಯನ್ನು ಶ್ರೀ ಆದಮ ಅಬ್ದುಲ್ ಖಾದರ ಶೇಖ ರವರಿಗೆ ಬಹಿರಂಗ ಹರಾಜಿನಲ್ಲಿ ಮಾರಾಟ ಮಾಡಿರುವ ಆಸ್ತಿಯ ಹರಾಜನ್ನು ಖಾಯಂಗೊಳಿಸಬೇಕೆಂದು ಉಲ್ಲೇಖ (3) ರಂತೆ ಈ ಕಛೇರಿಗೆ ಸವಿಸ್ತಾರವಾದ ವರದಿಯನ್ನು ಸಲ್ಲಿಸಿರುತ್ತಾರೆ.

ದಿನಾಂಕ 25-02-2011 ರಂದು ನಡೆಸಿದ ಸ್ಥಿರಾಸ್ತಿ ಬಹಿರಂಗ ಹರಾಜಿನ ನಡೆವಳಿಕೆಯನ್ನು ಪರಿಶೀಲಿಸಿದಾಗ ಸದರಿ ಸ್ಥಿರಾಸ್ತಿ ಬಹಿರಂಗ ಹರಾಜಿನಲ್ಲಿ ಒಟ್ಟೂ 12 ಜನ ಬಿಡ್‌ದಾರರು ಭಾಗವಹಿಸಿದ್ದು, ಈ ಪೈಕಿ ಅತ್ಯಧಿಕ ಬಿಡ್ಡುದಾರರಾದ ಶ್ರೀ ಆದಮ ಅಬ್ದುಲ್ ಖಾದರ ಶೇಖ ಇವರಿಗೆ ₹ 22,15,000/- (₹ ಇಪ್ಪತ್ತೆರಡು ಲಕ್ಷ ಹದಿನೈದು ಸಾವಿರ ಮಾತ್ರ) ಗಳಿಗೆ ಮಾರಾಟ ಮಾಡಿರುವುದು ದಾಖಲೆಗಳಿಂದ ತಿಳಿದು ಬಂದಿರುತ್ತದೆ. ಬಹಿರಂಗ ಹರಾಜು ನಡೆದ 30 ದಿನಗಳೊಳಗೆ ಬಾಕಿದಾರರು ವಾದಿ ಬ್ಯಾಂಕಿಗೆ ಬರಬೇಕಾದ ಸಾಲವನ್ನು ಮರುಪಾವತಿ ಮಾಡದೇ ಇರುವುದರಿಂದ ಮತ್ತು ಈ ಬಗ್ಗೆ ಯಾರಿಂದಲೂ ಯಾವುದೇ ಆಕ್ಷೇಪಣೆ ಸಲ್ಲಿಸದೇ ಇರುವುದರಿಂದ ದಿನಾಂಕ 25-02-2011 ರಂದು ನಡೆಸಲಾದ ಸ್ಥಿರಾಸ್ತಿ ಹರಾಜನ್ನು ಖಾಯಂಗೊಳಿಸಬಹುದೆಂದು ಮಾರಾಟಾಧಿಕಾರಿಯವರು ಸಲ್ಲಿಸಿದ ವರದಿಯನ್ನು ಪರಿಶೀಲಿಸಿ ಮಾರಾಟಾಧಿಕಾರಿಯವರು ಕೈಗೊಂಡ ಕ್ರಮಗಳು ಕಾನೂನುಬದ್ಧವಾಗಿದೆ ಎಂದು ಕಂಡು ಬಂದಿರುವುದರಿಂದ ಈ ಕೆಳಗಿನ ಸ್ಥಿರೀಕರಣದ ಆದೇಶ ಹೊರಡಿಸಲಾಗಿದೆ.

**ಆದೇಶ**

**ಕ್ರಮಸಂಖ್ಯೆ : ಸಿಇಪಿ/ಎಆರ್‌ಇ/ಯುಬಿಎಫ್/ಆರ್‌ಡಿ/6536/09-10, ದಿನಾಂಕ 10ನೇ ಮೇ 2011**

ಶ್ರೀ ಕೆ.ಎಲ್. ಶ್ರೀನಿವಾಸ, ಸಹಕಾರ ಸಂಘಗಳ ಸಹಾಯಕ ನಿಬಂಧಕರು (ನಿ.441) ಹಾಗೂ ವಸೂಲಾಧಿಕಾರಿಗಳು, ಕ.ರಾ.ಸ.ಪ. ಬ್ಯಾಂಕುಗಳ ಮಹಾ ಮಂಡಳ ನಿ., ಪ್ರಾಂತೀಯ ಕಛೇರಿ ಹುಬ್ಬಳ್ಳಿ ಆದ ನಾನು ಕರ್ನಾಟಕ ಸಹಕಾರ ಸಂಘಗಳ ನಿಯಮಗಳು 1960 ನಿಯಮ 38(6)(ಎ) ರನ್ವಯ ದತ್ತವಾಗಿರುವ ಅಧಿಕಾರವನ್ನು ಉಪಯೋಗಿಸಿ ಅಮಲ್ಜಾರಿ ಅರ್ಜಿ ಸಂಖ್ಯೆ : ಸಿಇಪಿ 6536/2009-10ನ್ನು ಶ್ರೀ ಚಂದ್ರಕಾಂತ ಕಾಶಿನಾಥ ಮಾಹೇಕರ್, ಬೇಳಾ ಬಂದರ ರಸ್ತೆ, ಅಂಕೋಲಾ ಇವರಿಗೆ ಸೇರಿದ ಈ ಕೆಳಗೆ ನಮೂದಿಸಿದ ಸ್ಥಿರಾಸ್ತಿಯನ್ನು ದಿನಾಂಕ 25-02-2011 ರಂದು ವಾದಿ ಬ್ಯಾಂಕಿನ ಮಾರಾಟಾಧಿಕಾರಿಯವರು ಮಾಡಿದ ಬಹಿರಂಗ ಹರಾಜಿನಲ್ಲಿ ಶ್ರೀ ಆದಮ ಅಬ್ದುಲ್ ಖಾದರ ಶೇಖ, ಕಾಕರಮಠ, ಬಬ್ರುವಾಡ, ಅಂಕೋಲಾ ಇವರು ಅತಿ ಹೆಚ್ಚಿನ ಬಿಡ್ಡುದಾರರಾಗಿದ್ದು, ಇವರಿಗೆ ₹ 22,15,000/- (₹ ಇಪ್ಪತ್ತೆರಡು ಲಕ್ಷ ಹದಿನೈದು ಸಾವಿರ ಮಾತ್ರ) ಗಳಿಗೆ ಈ ಕೆಳಗೆ ವಿವರಿಸಿದ ಸ್ಥಿರಾಸ್ತಿಯನ್ನು ಬಹಿರಂಗವಾಗಿ ಹರಾಜು ಮೂಲಕ ಮಾರಾಟ ಮಾಡಿರುವುದನ್ನು **ಖಾಯಂಗೊಳಿಸಿ ಸ್ಥಿರೀಕರಿಸಿರುವುದಾಗಿ ಈ ಮೂಲಕ ಆದೇಶ ಮಾಡಿದೆ.**

ಅಲ್ಲದೆ, ದಿ ಶಿರಸಿ ಅರ್ಬನ್ ಸಹಕಾರಿ ಬ್ಯಾಂಕ ಲಿ., ಶಿರಸಿ ಇದರ ಬಬ್ರುವಾಡಾ ಶಾಖೆಯಲ್ಲಿ ಸಹಕಾರ ಸಂಘಗಳ ಸಹಾಯಕ ನಿಬಂಧಕರು (ನಿ.441) ಹಾಗೂ ವಸೂಲಾಧಿಕಾರಿಗಳು, ಕ.ರಾ.ಸ.ಪ. ಬ್ಯಾಂಕುಗಳ ಮಹಾ ಮಂಡಳ ನಿ., ಪ್ರಾಂತೀಯ ಕಛೇರಿ ಹುಬ್ಬಳ್ಳಿ ಇವರ ಅಮಾನತ ಖಾತೆಯಲ್ಲಿ ಜಮಾ ಇರುವ ಒಟ್ಟೂ ರಖಂ ₹ 23,87,770-00 ಗಳಲ್ಲಿ ಶಿರಸಿ ಅರ್ಬನ್ ಸಹಕಾರಿ ಬ್ಯಾಂಕಿನ ತೀರ್ಪು ಬಾಕಿದಾರರಾದ ಶ್ರೀ ಚಂದ್ರಕಾಂತ ಕಾಶಿನಾಥ ಮಾಹೇಕರ್ ಇವರ ಆಸ್ತಿ ಅಡವು ಸಾಲ ಖಾತೆಗೆ ₹ 7,92,918-00 ಗಳನ್ನು ಜಮಾ ಪಡೆದುಕೊಳ್ಳಲು ಮತ್ತು ಉಳಿದ ₹ 15,94,852-00 ಗಳಲ್ಲಿ ಮುದ್ರಾಂಕ ಶುಲ್ಕಕ್ಕೆ ₹ 1,50,620-00 ಹಾಗೂ ನೋಂದಣಿ ಫೀ ₹ 22,150-00 ಭರಣ ಮಾಡಲು ಹಾಗೂ ಬಾಕಿ ಉಳಿದ ₹ 14,22,082-00 ಗಳಲ್ಲಿ ತೀರ್ಪು ಬಾಕಿದಾರ ಶ್ರೀ ಚಂದ್ರಕಾಂತ ಕಾಶಿನಾಥ ಮಾಹೇಕರ್ ಇವರು ಸುಪ್ರಭಾತ ಕ್ರೆಡಿಟ್ ಸೌಹಾರ್ದ ನಿ., ಅಂಕೋಲಾ ಇವರಲ್ಲಿ ಹೊಂದಿರುವ ಸಾಲ ಖಾತೆಗೆ ಜಮಾ ಪಡೆದುಕೊಳ್ಳುವ ಬಗ್ಗೆ ₹ 8,85,576-00 ಗಳನ್ನು ಸಂದಾಯ ಮಾಡಿ ಇನ್ನುಳಿದ ರಖಂ ₹ 5,36,506-00 ಗಳಲ್ಲಿ ಶಿರಸಿ ಅರ್ಬನ್ ಸಹಕಾರಿ ಬ್ಯಾಂಕಿಗೆ ಬಹಿರಂಗ ಹರಾಜ ಬಗ್ಗೆ ತಗುಲಿದ ಒಟ್ಟೂ ಖರ್ಚು ರಖಂ ₹ 8,429-00 ಗಳನ್ನು ದಿ ಶಿರಸಿ ಅರ್ಬನ್ ಸಹಕಾರಿ ಬ್ಯಾಂಕ

ಲಿ., ಬೊಬ್ರುವಾಡಾ ಶಾಖೆಗೆ ಬಟವಾಡೆ ಮಾಡಿ ಉಳಿದ ಹೆಚ್ಚುವರಿ ಹಣ ₹ 5,28,077–00 ಗಳನ್ನು ಮುಂದಿನ ಆದೇಶವಾಗುವ ವರೆಗೆ ಅಮಾನತ್ ಖಾತೆಯಲ್ಲಿಯೇ ಜಮಾ ಮುಂದುವರಿಸಿಕೊಂಡು ಹೋಗಲು ಶಿರಸಿ ಅರ್ಬನ್ ಸಹಕಾರಿ ಬ್ಯಾಂಕ ಲಿ., ಶಾಖೆ : ಬಬ್ರುವಾಡಾ ಇದರ ಶಾಖಾ ವ್ಯವಸ್ಥಾಪಕರಿಗೆ ಈ ಮೂಲಕ ಆದೇಶ ನೀಡಲಾಗಿದೆ.

**ಸ್ಥಿರಾಸ್ತಿಯ ವಿವರ**

ಉತ್ತರ ಕನ್ನಡ ಜಿಲ್ಲಾ, ಅಂಕೋಲಾ ತಾಲೂಕ, ಬಬ್ರುವಾಡಾ ಗ್ರಾಮದಲ್ಲಿರುವ ಸ್ಥಿರಾಸ್ತಿ ರೆವೆನ್ಯೂ ಸರ್ವೇ ನಂ. 387/1 ಅ ಕ್ಷೇತ್ರ : 0–02–04–00 ಸರ್ವೇ ಗಡಿಯೊಳಗಿನಲ್ಲಿ ಇರತಕ್ಕ ಬಬ್ರುವಾಡಾ ಗ್ರಾಮ ಪಂಚಾಯತ ಪಳ್ಳಿಕೇರಿ ವಾರ್ಡಿನ ಆಸ್ತಿ ನಂಬರ್ 669 ರ ಮನೆ ಸಹಿತ.

ಮಾರಾಟದ ಮೊಬಲಗು : ₹ 22,15,000–00

ಮಾರಾಟ ಮಾಡಿದ ದಿನಾಂಕ : 25–02–2011

ಈ ಆದೇಶವನ್ನು ನನ್ನ ಸಹಿ ಹಾಗೂ ಕಛೇರಿಯ ಮುದ್ರೆಯೊಂದಿಗೆ ದಿನಾಂಕ : 10–05–2011ರಂದು ನೀಡಲಾಗಿದೆ.

ಸಹಕಾರ ಸಂಘಗಳ ಸಹಾಯಕ ನಿಬಂಧಕರು (ನಿ.441) ಹಾಗೂ ವಸೂಲಾಧಿಕಾರಿಗಳು,
ಕ.ರಾ.ಸ.ಪ. ಬ್ಯಾಂಕುಗಳ ಮಹಾ ಮಂಡಳ ನಿ., ಪ್ರಾಂತೀಯ ಕಛೇರಿ,
ನಂ. ಐ. 9/10, ಡಾಲರ್ಸ್ ಕಾಲೋನಿ, ಗೋಕುಲ ರಸ್ತೆ, ಹುಬ್ಬಳ್ಳಿ–580 030

**ನಮೂನೆ ಕ್ರಮಾಂಕ – 10**

ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959 ರನ್ವಯ ರಚಿತವಾದ ನಿಯಮ 38, ಉಪನಿಯಮ 7ರ ಪ್ರಕಾರ ಕೊಟ್ಟ

**ವಿಕ್ರಿ ಪ್ರಮಾಣ ಪತ್ರ**

**ಮುದ್ರಾಂಕ ಶುಲ್ಕ ಹಾಗೂ ನೋಂದಣಿ ಶುಲ್ಕ ಭರಣ ಮಾಡಿದ ವಿವರ**

| ವಿವರ | ಭರಣ ಮಾಡಿದ ದಿನಾಂಕ | ಭರಣ ಮಾಡಿದ ರಖಂ | | ಭರಣ ಮಾಡಿದ ವಿವರ |
|---|---|---|---|---|
| ಮುದ್ರಾಂಕ ಶುಲ್ಕ | 23–05–2011 | 1,32,900 | ... | By State Bank of Mysore Banker Cheques |
| ನೋಂದಣಿ ಶುಲ್ಕ | 23–05–2011 | 22,150 | ... | -do- |

ದಾವಾ ಸಂಖ್ಯೆ : ಜೆಆರ್‌ಡಿ/ಯುಬಿಎಫ್/3196/2009–10
ಅಮಲ್ಜಾರಿ ಸಂಖ್ಯೆ ಸಿಇಪಿ ಸಂಖ್ಯೆ : 6536/2009–10

ಹೆಸರು : ಶ್ರೀ ಕೆ.ಎಲ್. ಶ್ರೀನಿವಾಸ,
ಸಹಕಾರ ಸಂಘಗಳ ಸಹಾಯಕ ನಿಬಂಧಕರು (ನಿ.441) ಹಾಗೂ ವಸೂಲಾಧಿಕಾರಿಗಳು,
ಕ.ರಾ.ಸ.ಪ. ಬ್ಯಾಂಕುಗಳ ಮಹಾ ಮಂಡಳ ನಿ., ಪ್ರಾಂತೀಯ ಕಛೇರಿ, ಹುಬ್ಬಳ್ಳಿ–580 030

ದಿ ಶಿರಸಿ ಅರ್ಬನ್ ಸಹಕಾರಿ ಬ್ಯಾಂಕ ಲಿ., ಶಿರಸಿ **ಡಿಕ್ರಿದಾರ**

**ವಿರುದ್ಧ**

ಶ್ರೀ ಚಂದ್ರಕಾಂತ ಕಾಶಿನಾಥ ಮಾಹೇಕರ್,
ಬೇಳಾ ಬಂದರ ರಸ್ತೆ, ಅಂಕೋಲಾ **ತೀರ್ಪು ಬಾಕಿದಾರ**

ಸಹಕಾರ ಸಂಘಗಳ ಸಹಾಯಕ ನಿಬಂಧಕರು (ನಿ.441) ಹಾಗೂ ವಸೂಲಾಧಿಕಾರಿಗಳು,
ಕ.ರಾ.ಸ.ಪ. ಬ್ಯಾಂಕುಗಳ ಮಹಾ ಮಂಡಳ ನಿ., ಪ್ರಾಂತೀಯ ಕಛೇರಿ,
ನಂ. ಐ. 9/10, ಡಾಲರ್ಸ್ ಕಾಲೋನಿ, ಗೋಕುಲ ರಸ್ತೆ, ಹುಬ್ಬಳ್ಳಿ–580 030

ಈ ಮೂಲಕ ಪ್ರಮಾಣೀಕರಿಸುವುದೇನೆಂದರೆ,

ಉತ್ತರ ಕನ್ನಡ ಜಿಲ್ಲಾ, ಅಂಕೋಲಾ ತಾಲೂಕು, ಕಾಕರಮಠ, ಬಬ್ರುವಾಡಾ ಗ್ರಾಮದ ರಹವಾಸಿ ಶ್ರೀ ಆದಮ ಅಬ್ದುಲ್ ಖಾದರ ಶೇಖ್ ಇವರು ಉತ್ತರ ಕನ್ನಡ ಜಿಲ್ಲಾ, ಅಂಕೋಲಾ ತಾಲೂಕು, ಬಬ್ರುವಾಡಾ ಗ್ರಾಮದ ನಿವಾಸಿ ಶ್ರೀ ಚಂದ್ರಕಾಂತ ಕಾಶಿನಾಥ ಮಾಹೇಕರ್, ಬೇಳಾ ಬಂದರ ರಸ್ತೆ, ಅಂಕೋಲಾ, ಇವರಿಂದ ದಿ ಶಿರಸಿ ಅರ್ಬನ್ ಸಹಕಾರಿ ಬ್ಯಾಂಕ ಲಿ., ಶಿರಸಿ, ಇದರ ಬಬ್ರುವಾಡಾ ಶಾಖೆಗೆ ಸಂದಾಯವಾಗತಕ್ಕ ತೀರ್ಪು ಬಾಕಿ ರಕಮು ವಸೂಲಿ ಬಗ್ಗೆ ಈ ಕಾರ್ಯಾಲಯದಲ್ಲಿ ದಾಖಲು ಪಡಿಸಿದ ಅಮಲ್ಜಾರಿ ಪ್ರಕರಣ ಸಂಖ್ಯೆ : ಸಿಇಪಿ ಸಂಖ್ಯೆ : 6536/2009–10 ನೇದರ

ಅಮಲ ಬಜಾವಣೆಯಲ್ಲಿ ಈ ಕೆಳಗೆ ಅನುಬಂಧದಲ್ಲಿ ಕಾಣಿಸಿದ ತೀರ್ಪು ಬಾಕಿದಾರನ ಸ್ಥಿರಾಸ್ತಿಯನ್ನು ಅಧಿಕಾರ ಹೊಂದಿದ ಮಾರಾಟಾಧಿಕಾರಿ, ದಿ ಶಿರಸಿ ಅರ್ಬನ್ ಸಹಕಾರಿ ಬ್ಯಾಂಕ ಲಿ., ಬಬ್ರುವಾಡಾ ಶಾಖೆ ಇವರು ನಡೆಸಿದ ಜಾಹೀರ ಲಿಲಾವಿನಲ್ಲಿ **ಶ್ರೀ ಆದಮ ಅಬ್ದುಲ್ ಖಾದರ ಶೇಖ, ಕಾಕರಮಠ, ಬಬ್ರುವಾಡಾ, ತಾಲೂಕ : ಅಂಕೋಲಾ** ಇವರು ಖರೀದಿಸಿ, ಖರೀದಿ ರಖಂ ₹ 22,15,000/– (₹ ಇಪ್ಪತ್ತೆರಡು ಲಕ್ಷ ಹದಿನೈದು ಸಾವಿರ ಮಾತ್ರ) ವನ್ನು ಪಾವತಿ ಮಾಡಿರುತ್ತಾರೆ, ಮತ್ತು ಸದ್ರಿ ವಿಕ್ರಿಯು ನನ್ನಿಂದ ದಿನಾಂಕ 10–05–2011 ರಂದು ಖಾಯಂ ಮಾಡಲ್ಪಟ್ಟಿರುತ್ತದೆ.

ಸಹಕಾರ ಸಂಘಗಳ ಸಹಾಯಕ ನಿಬಂಧಕರು (ನಿ.441) ಹಾಗೂ ವಸೂಲಾಧಿಕಾರಿಗಳು,
ಕ.ರಾ.ಸ.ಪ. ಬ್ಯಾಂಕುಗಳ ಮಹಾ ಮಂಡಳ ನಿ., ಪ್ರಾಂತೀಯ ಕಛೇರಿ,
ನಂ. ಐ. 9/10, ಡಾಲರ್ಸ್ ಕಾಲೋನಿ, ಗೋಕುಲ ರಸ್ತೆ, ಹುಬ್ಬಳ್ಳಿ–580 030

**ಸ್ಥಿರಾಸ್ತಿಗಳ ಅನುಬಂಧ :**

ನೋಂದಣಿ ಜಿಲ್ಲಾ : ಉತ್ತರ ಕನ್ನಡ
ತಾಲೂಕು : ಅಂಕೋಲಾ
ಗ್ರಾಮ : ಬಬ್ರುವಾಡಾ

**ಸ್ಥಿರಾಸ್ತಿಗಳ ವರ್ಣನೆ**

ಉತ್ತರ ಕನ್ನಡ ಜಿಲ್ಲಾ, ಅಂಕೋಲಾ ತಾಲೂಕ, ಬಬ್ರುವಾಡಾ ಗ್ರಾಮ ರೆವೆನ್ಯೂ ಸರ್ವೇ ನಂ. 387/1 ಅ ಕ್ಷೇತ್ರ : 0–02–04–00 ಸರ್ವೇ ಗಡಿಯೊಳಗಿನ ಆಸ್ತಿ ಹಾಗೂ ಇದರಲ್ಲಿ ಇರತಕ್ಕ ಬಬ್ರುವಾಡಾ ಗ್ರಾಮ ಪಂಚಾಯತ ಪಳ್ಳಿಕೇರಿ ವಾರ್ಡಿನ ಆಸ್ತಿ ನಂಬರ್ 669 ರ ಇಮಾರತು ಸಹಿತ.

ವಿಕ್ರಿ ಕಿಮ್ಮತ್ತು ಅಂತೂ : ₹ 22,15,000/– (₹ ಇಪ್ಪತ್ತೆರಡು ಲಕ್ಷ ಹದಿನೈದು ಸಾವಿರ ಮಾತ್ರ)
ಮಾರಾಟ ದಿನಾಂಕ : 25–02–2011

ಸಹಕಾರ ಸಂಘಗಳ ಸಹಾಯಕ ನಿಬಂಧಕರು (ನಿ.441) ಹಾಗೂ ವಸೂಲಾಧಿಕಾರಿಗಳು,
ಕ.ರಾ.ಸ.ಪ. ಬ್ಯಾಂಕುಗಳ ಮಹಾ ಮಂಡಳ ನಿ., ಪ್ರಾಂತೀಯ ಕಛೇರಿ,
ನಂ. ಐ. 9/10, ಡಾಲರ್ಸ್ ಕಾಲೋನಿ, ಗೋಕುಲ ರಸ್ತೆ, ಹುಬ್ಬಳ್ಳಿ–580 030

ನನ್ನ ಸಹಿ ಹಾಗೂ ಕಛೇರಿ ಮೊಹರಿನೊಂದಿಗೆ ಇಂದು ದಿನಾಂಕ : 10–05–2011 ರಂದು ಕೊಡಲ್ಪಟ್ಟಿತ್ತು.

ಸಹಕಾರ ಸಂಘಗಳ ಸಹಾಯಕ ನಿಬಂಧಕರು (ನಿ.441) ಹಾಗೂ ವಸೂಲಾಧಿಕಾರಿಗಳು,
ಕ.ರಾ.ಸ.ಪ. ಬ್ಯಾಂಕುಗಳ ಮಹಾ ಮಂಡಳ ನಿ., ಪ್ರಾಂತೀಯ ಕಛೇರಿ,
ಸ್ಥಳ : ಹುಬ್ಬಳ್ಳಿ ನಂ. ಐ. 9/10, ಡಾಲರ್ಸ್ ಕಾಲೋನಿ, ಗೋಕುಲ ರಸ್ತೆ, ಹುಬ್ಬಳ್ಳಿ–580 030

ಯಥಾ ನಕಲು :

ಇದರ ಯಥಾ ನಕಲುಗಳನ್ನು ಅಭಿನಂದನೆಗಳೊಂದಿಗೆ (1) ಹಿರಿಯ ಉಪನೋಂದಣಾಧಿಕಾರಿಗಳು, ಕಾರವಾರ ರವರಿಗೆ (2) ಮಾನ್ಯ ತಹಸೀಲ್ದಾರರು ಅಂಕೋಲಾ ತಾಲೂಕ, ಅಂಕೋಲಾ ರವರಿಗೆ ಹಾಗೂ (3) ಕಾರ್ಯದರ್ಶಿ, ಗ್ರಾಮಪಂಚಾಯತ, ಬಬ್ರುವಾಡಾ ರವರಿಗೆ ವಿಕ್ರಿ ಪ್ರಮಾಣ ಪತ್ರದಲ್ಲಿ ನಮೂದಿಸಿದ ಸ್ಥಿರಾಸ್ತಿಗಳ ಕುರಿತು ಸಂಬಂಧಿಸಿದ ದಾಖಲೆಗಳಲ್ಲಿ ಅವಶ್ಯಕ ಬದಲಾವಣೆ ಆಗುವಂತೆ ವ್ಯವಸ್ಥೆ ಮಾಡುವ ಬಗ್ಗೆ ಕೋರಿದೆ.

ಸಹಕಾರ ಸಂಘಗಳ ಸಹಾಯಕ ನಿಬಂಧಕರು (ನಿ.441) ಹಾಗೂ ವಸೂಲಾಧಿಕಾರಿಗಳು,
ಸ್ಥಳ : ಹುಬ್ಬಳ್ಳಿ ಕ.ರಾ.ಸ.ಪ. ಬ್ಯಾಂಕುಗಳ ಮಹಾ ಮಂಡಳ ನಿ., ಪ್ರಾಂತೀಯ ಕಛೇರಿ,
ದಿನಾಂಕ : 10–05–2011 ನಂ. ಐ. 9/10, ಡಾಲರ್ಸ್ ಕಾಲೋನಿ, ಗೋಕುಲ ರಸ್ತೆ, ಹುಬ್ಬಳ್ಳಿ–580 030

**ಸಹಕಾರ ಇಲಾಖೆ**

**ಸಹಕಾರ ಸಂಘಗಳ ಸಹಾಯಕ ನಿಬಂಧಕರು (ನಿ. 441) ಹಾಗೂ ವಸೂಲಾಧಿಕಾರಿಗಳು, ಕರ್ನಾಟಕ ರಾಜ್ಯ ಸಹಕಾರ ಪಟ್ಟಣ ಬ್ಯಾಂಕುಗಳ ಮಹಾಮಂಡಳ ನಿ., ಪ್ರಾಂತೀಯ ಕಛೇರಿ, ಹುಬ್ಬಳ್ಳಿ ಇವರ ನ್ಯಾಯಾಲಯಗಳಲ್ಲಿ**

**ಫಾರ್ಮ ನಂ. – 11**

**38ನೇ ಯ ರೂಲಿನ (7) ಕಲಂ**

**ಸ್ಥಿರ ಸ್ವತ್ತುಗಳನ್ನು ಕೊಂಡದ್ದಕ್ಕೆ ಪ್ರಕಟಣೆ**

ದಾವಾ ಸಂಖ್ಯೆ : ಜೆಆರ್‌ಡಿ: ಯುಬಿಎಫ್/3196:2009–10

ಅಮಲ್ಜಾರಿ ಸಂಖ್ಯೆ : ಸಿಇಪಿ : 6536/09–10

ಉತ್ತರ ಕನ್ನಡ ಜಿಲ್ಲಾ, ಅಂಕೋಲ ತಾಲೂಕ, ಬಬ್ರುವಾಡಾ ಗ್ರಾಮ, ಕಾಕರಮತ, ಅಂಕೋಲಾ ನಿವಾಸಿ ಶ್ರೀ ಆದಮ ಅಬ್ದುಲ್ ಖಾದರ ಶೇಖ ಇವರು ಈ ಕೆಳಗೆ ತೋರಿಸಿದ ಶ್ರೀ ಚಂದ್ರಕಾಂತ ಕಾಶಿನಾಥ ಮಾಹೇಕರ್, ಬೇಳಾ ಬಂದರ ರಸ್ತೆ, ಅಂಕೋಲಾ ಇವರಿಗೆ ಸೇರಿದ ಈ ಕೆಳಗೆ ನಮೂದಿಸಿದ ಸ್ಥಿರಾಸ್ತಿಯನ್ನು ಬಹಿರಂಗ ಹರಾಜಿನಲ್ಲಿ 2011ನೇ ಇಸವಿ ಫೆಬ್ರವರಿ ತಿಂಗಳ 25ನೇ ತಾರೀಖಿನಂದು ಕ್ರಯಕ್ಕೆ ಕೊಂಡಿರುತ್ತಾರಾಗಿಯೂ ಮತ್ತು ದರಖಾಸ್ತು ರಖಂ ರೂ. 22,15,000/– (ರೂಪಾಯಿ ಇಪ್ಪತ್ತೆರಡು ಲಕ್ಷ ಹದಿನೈದು ಸಾವಿರ ಮಾತ್ರ) ವನ್ನು ಸಂಪೂರ್ಣವಾಗಿ ಪಾವತಿ ಮಾಡಿದ್ದರಾಗಿಯೂ ಈ ಮೂಲಕ ಎಲ್ಲಾ ಜನರಿಗೆ ಬಹಿರಂಗವಾಗಿ ತಿಳಿಸೋಣವಾಗುತ್ತದೆ. ಆದ ಪ್ರಯುಕ್ತ ಸದರ್ ಸ್ಥಿರಾಸ್ತಿಯಲ್ಲಿರುವ ತೀರ್ಪು ಬಾಕಿದಾರ ಶ್ರೀ ಚಂದ್ರಕಾಂತ ಕಾಶಿನಾಥ ಮಾಹೇಕರ್, ಬೇಳಾ ಬಂದರ ರಸ್ತೆ, ಬಬ್ರುವಾಡಾ, ತಾಲೂಕ : ಅಂಕೋಲಾ ಇವರ ಸದರಿ ಹಕ್ಕು ವ ಪ್ರಯೋಜನಗಳಿಗೆ ಶ್ರೀ ಆದಮ ಅಬ್ದುಲ್ ಖಾದರ ಶೇಖ, ಕಾಕರಮತ, ಬಬ್ರುವಾಡಾ, ತಾಲೂಕ : ಅಂಕೋಲಾ ಇವರು ಉತ್ತರಾಧಿಕಾರಿಗಳಾಗಿದ್ದಾರೆ ಎಂಬುದಾಗಿ ಈ ಮೂಲಕ ದೃಢಪಡಿಸೋಣವಾಗುತ್ತದೆ.

| ತಾಲೂಕು | ಗ್ರಾಮ | ರೆವೆನ್ಯೂ ಸರ್ವೇ ನಂಬರ್ | ಕ್ಷೇತ್ರ | ಖಾತೆದಾರನ ಹೆಸರು |
|---|---|---|---|---|
| ಅಂಕೋಲಾ | ಬಬ್ರುವಾಡಾ | 387/1ಅ | 0–02–04 ಹಾಗೂ ಇದರಲ್ಲಿ ಇರತಕ್ಕ ಬಬ್ರುವಾಡಾ ಗ್ರಾಮ ಪಂಚಾಯತ ಪಳ್ಳಿಕೇರಿ ವಾರ್ಡಿನ ಆಸ್ತಿ ನಂಬರ್ 669 ರ ಇಮಾರತು ಸಹಿತ | ಶ್ರೀ ಆದಮ ಅಬ್ದುಲ್ ಖಾದರ ಶೇಖ |

ಸಹಕಾರ ಸಂಘಗಳ ಸಹಾಯಕ ನಿಬಂಧಕರು (ನಿ.441) ಹಾಗೂ ವಸೂಲಾಧಿಕಾರಿಗಳು,
ಕ.ರಾ.ಸ.ಪ. ಬ್ಯಾಂಕುಗಳ ಮಹಾ ಮಂಡಳ ನಿ., ಪ್ರಾಂತೀಯ ಕಛೇರಿ,
ನಂ. ಐ. 9/10, ಡಾಲರ್ಸ್ ಕಾಲೋನಿ, ಗೋಕುಲ ರಸ್ತೆ, ಹುಬ್ಬಳ್ಳಿ–580 030

ಸ್ಥಳ : ಹುಬ್ಬಳ್ಳಿ
ದಿನಾಂಕ : 10–05–2011

**ಪಿ.ಆರ್. ನಂ. 736**

**ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕರ ನಷ್ಟ ಪರಿಹಾರ ಆಯುಕ್ತರವರ ನ್ಯಾಯಾಲಯ, ದಾವಣಗೆರೆ ಜಿಲ್ಲೆ, ದಾವಣಗೆರೆ**
**ಪ್ರ.ಸಂ. ಕಾಅದಾ : ಕಾನಪ : ಸಿಆರ್–73/2011, ದಿನಾಂಕ: 4ನೇ ಜುಲೈ 2011**

**ಅರ್ಜಿದಾರರು**

1) ಶ್ರೀಮತಿ ಲಂಕ ಕೋಂ ಲೇಟ್ ರಮೇಶ್ ತೆಕ್ವಾಲೇ
2) ಪ್ರಥಮೇಶ್ ಬಿನ್ ಲೇಟ್ ರಮೇಶ್ ತೆಕ್ವಾಲೇ (6 ವರ್ಷ)
3) ಕುಮಾರಿ ಪ್ರತೀಕ್ಷ ಬಿನ್ ಲೇಟ್ ರಮೇಶ್ ತೆಕ್ವಾಲೇ (5 ವರ್ಷ)
4) ಶ್ರೀಮತಿ ಸುಮನ್‌ಬಾಯಿ ಕೋಂ ಸಹೇಬ್ ತೆಕ್ವಾಲೇ ತಾಯಿ

4ನೇಮೈನ್, 2ನೇ ಕ್ರಾಸ್, ಯಲ್ಲಮ್ಮನಗರ, ದಾವಣಗೆರೆ

**ವಿರುದ್ಧ**

**ಪ್ರತಿವಾದಿಗಳು**

1) ಸುಧಾಮ ಭೀಮರಾವ್ ಪಾಲ್ ಲಾರಿ ಮಾಲೀಕರು, ನಂ. 1, ಎಂ. ಹೆಚ್. 04/ಡಿ.ಕೆ. 7029, ಪ್ಲಾಟ್ ನಂ. 10, ಸಲೀವ್ ಬಿಲ್ಡಿಂಗ್, ನ್ಯೂ ಸಫೀರ್, ಕೋಹಿನೂರು ಗ್ರಾಮ, ಬಿವಾಂಡಿ ಠಾಣೆ, ಮಹಾರಾಷ್ಟ್ರ ರಾಜ್ಯ
2) ದಿ. ಮ್ಯಾನೇಜರ್, ಶ್ರೀರಾಮ ಜನರಲ್ ಇನ್ಸೂರೆನ್ಸ್ ಕಂ. ಲಿ., ಎಸ್/5, 3ನೇ ಮಹಡಿ, ಮೋನಾರ್ಕ್ ಚೇಂಬರ್, ಇನ್‌ಪೆಂಟ್ರಿ ರಸ್ತೆ, ಶಿವಾಜಿನಗರ, ಬೆಂಗಳೂರು

**ಪ್ರಕಟಣೆ**

ಶ್ರೀ/ಶ್ರೀಮತಿ ಲಂಕ, ಪ್ರಥಮೇಶ್, ಪ್ರತೀಕ್ಷ ಮತ್ತು ಸುಮನ್‌ಬಾಯಿ ಇವರುಗಳಾದ ನಾವು ಮೃತ ರಮೇಶ್ ತೆಕ್ವಾಲೇ ಇವರ ಹೆಂಡತಿ, ಮಕ್ಕಳು ಮತ್ತು ತಾಯಿ ಎಂದೂ ಅವರ ಸಾವಿಗಾಗಿ ನಷ್ಟ ಪರಿಹಾರ ಕೋರಿ ಈ ನ್ಯಾಯಾಲಯದಲ್ಲಿ ಅರ್ಜಿ ಸಲ್ಲಿಸಿರುತ್ತಾರೆ. ಮೃತ ರಮೇಶ್ ತೆಕ್ವಾಲೇರವರು ಒಂದನೇ ಪ್ರತಿವಾದಿಗಳಾದ ಸುಧಾಮ ಭೀಮರಾವ್ ಪಾಲೆ ಇವರ ಲಾರಿ ರಲ್ಲಿ ಚಾಲಕ ಆಗಿ ಕೆಲಸ ನಿರ್ವಹಿಸುತ್ತಿದ್ದಾಗ ಸಂಭವಿಸಿದ ಅಪಘಾತದಲ್ಲಿ ಮರಣ ಹೊಂದಿದರೆಂದೂ, ಸದರಿ ಅರ್ಜಿದಾರರು ತಿಳಿಸಿರುತ್ತಾರೆ. ಈ ಸಂಬಂಧವಾಗಿ ಈ ಪ್ರಕಟಣೆಯ ಮೂಲಕ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ತಿಳಿಸುವುದೇನೆಂದರೆ ಈ ಬಗ್ಗೆ ಏನಾದರೂ ಆಕ್ಷೇಪಣೆಗಳಾಗಲೀ ಅಥವಾ ಬೇರೆ ಯಾರಾದರೂ ಮೃತರ ಶಾಸನಬದ್ಧ ವಾರಸುದಾರರು ಎಂದು ಪರಿಗಣಿಸಬೇಕೆಂದು ಪ್ರಾರ್ಥಿಸುವುದಾದರೆ, ಅಂತಹವರು ಪ್ರಕಟಣೆಯು ಈ ನ್ಯಾಯಾಲಯದಲ್ಲಿ ನಾಮಫಲಕದಲ್ಲಿ ಪ್ರಕಟಿಸಿದ 30 ದಿನಗಳೊಳಗಾಗಿ ಅಂತಹ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಯನ್ನಾಗಲೀ ಈ ನ್ಯಾಯಾಲಯದಲ್ಲಿ ಸಲ್ಲಿಸತಕ್ಕದ್ದು. ಅವಧಿ ಮೀರಿ ಬಂದ ಅರ್ಜಿಗಳನ್ನು ಮಾನ್ಯ ಮಾಡಲಾಗುವುದಿಲ್ಲ.

ಕಾರ್ಮಿಕ ಅಧಿಕಾರಿ ಮತ್ತು ಆಯುಕ್ತರು ಕಾರ್ಮಿಕ ನಷ್ಟ
ಪರಿಹಾರ, ದಾವಣಗೆರೆ ಜಿಲ್ಲೆ, ದಾವಣಗೆರೆ

**ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕರ ನಷ್ಟ ಪರಿಹಾರ ಆಯುಕ್ತರವರ ನ್ಯಾಯಾಲಯ, ದಾವಣಗೆರೆ ಜಿಲ್ಲೆ, ದಾವಣಗೆರೆ**

**ಪ್ರ.ಸಂ. ಕಾಅದಾ : ಕಾನಪ : ಸಿಆರ್–74/2011, ದಿನಾಂಕ: 4ನೇ ಜುಲೈ 2011**

| ಅರ್ಜಿದಾರರು | ವಿರುದ್ಧ | ಪ್ರತಿವಾದಿಗಳು |
|---|---|---|
| ಶ್ರೀಮತಿ ಪಾರಿಬಾಯಿ ಕೋಂ ಲೇಟ್ ಕಾಶೀನಾಥ್ ಪಾಣೆ, ಧನೂರು ಗ್ರಾಮ, ಜಂತೂರು ತಾಲ್ಲೂಕು<br>ಪ್ರಸ್ತುತಿ : 4ನೇಮೈನ್, 2ನೇ ಕ್ರಾಸ್, ಯಲ್ಲಮ್ಮನಗರ, ದಾವಣಗೆರೆ | | 1) ಸುಧಾಮ ಭೀಮರಾವ್ ಪಾಲ್ ಲಾರಿ ಮಾಲೀಕರು, ನಂ. 1, ಎಂ. ಹೆಚ್. 04/ಡಿ.ಕೆ. 7029, ಪ್ಲಾಟ್ ನಂ. 10, ಸಲೀವ್ ಬಿಲ್ಡಿಂಗ್, ನ್ಯೂ ಸಫಿರ್, ಕೋಹಿನೂರು ಗ್ರಾಮ, ಬಿವಾಂಡಿ ಠಾಣೆ, ಮಹಾರಾಷ್ಟ್ರ ರಾಜ್ಯ<br>2) ದಿ. ಮ್ಯಾನೇಜರ್, ಶ್ರೀರಾಮ ಜನರಲ್ ಇನ್ಸೂರೆನ್ಸ್ ಕಂ. ಲಿ., ಎಸ್/5, 3ನೇ ಮಹಡಿ, ಮೋನಾರ್ಕ್ ಚೇಂಬರ್, ಇನ್‌ಪೆಂಟ್ರಿ ರಸ್ತೆ, ಶಿವಾಜಿನಗರ, ಬೆಂಗಳೂರು |

**ಪ್ರಕಟಣೆ**

ಶ್ರೀ/ಶ್ರೀಮತಿ ಪಾರಿಬಾಯಿ ಇವರುಗಳಾದ ನಾವು ಮೃತ ಕಾಶಿನಾಥ ಪಾಣೆ ಇವರ ತಾಯಿ ಎಂದೂ ಅವರ ಸಾವಿಗಾಗಿ ನಷ್ಟ ಪರಿಹಾರ ಕೋರಿ ಈ ನ್ಯಾಯಾಲಯದಲ್ಲಿ ಅರ್ಜಿ ಸಲ್ಲಿಸಿರುತ್ತಾರೆ. ಮೃತ ಕಾಶಿನಾಥ ಪೌಣೆರವರು ಒಂದನೇ ಪ್ರತಿವಾದಿಗಳಾದ ಸುಧಾಮ ಭೀಮರಾವ್ ಪಾಲೆ ಇವರ ಲಾರಿ ರಲ್ಲಿ ಕ್ಲೀನರ್ ಆಗಿ ಕೆಲಸ ನಿರ್ವಹಿಸುತ್ತಿದ್ದಾಗ ಸಂಭವಿಸಿದ ಅಪಘಾತದಲ್ಲಿ ಮರಣ ಹೊಂದಿದರೆಂದೂ, ಸದರಿ ಅರ್ಜಿದಾರರು ತಿಳಿಸಿರುತ್ತಾರೆ. ಈ ಸಂಬಂಧವಾಗಿ ಈ ಪ್ರಕಟಣೆಯ ಮೂಲಕ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ತಿಳಿಸುವುದೇನೆಂದರೆ ಈ ಬಗ್ಗೆ ಏನಾದರೂ ಆಕ್ಷೇಪಣೆಗಳಾಗಲೀ ಅಥವಾ ಬೇರೆ ಯಾರಾದರೂ ಮೃತರ ಶಾಸನಬದ್ಧ ವಾರಸುದಾರರು ಎಂದು ಪರಿಗಣಿಸಬೇಕೆಂದು ಪ್ರಾರ್ಥಿಸುವುದಾದರೆ, ಅಂತಹವರು ಪ್ರಕಟಣೆಯು ಈ ನ್ಯಾಯಾಲಯದಲ್ಲಿ ನಾಮಫಲಕದಲ್ಲಿ ಪ್ರಕಟಿಸಿದ 30 ದಿನಗಳೊಳಗಾಗಿ ಅಂತಹ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಯನ್ನಾಗಲೀ ಈ ನ್ಯಾಯಾಲಯದಲ್ಲಿ ಸಲ್ಲಿಸತಕ್ಕದ್ದು. ಅವಧಿ ಮೀರಿ ಬಂದ ಅರ್ಜಿಗಳನ್ನು ಮಾನ್ಯ ಮಾಡಲಾಗುವುದಿಲ್ಲ.

ಕಾರ್ಮಿಕ ಅಧಿಕಾರಿ ಮತ್ತು ಅಯುಕ್ತರು ಕಾರ್ಮಿಕ
ನಷ್ಟ ಪರಿಹಾರ, ದಾವಣಗೆರೆ ಜಿಲ್ಲೆ, ದಾವಣಗೆರೆ

**ಪಿ.ಆರ್. 693**

**ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕರ ನಷ್ಟ ಪರಿಹಾರ ಆಯುಕ್ತರವರ ನ್ಯಾಯಾಲಯ, ದಾವಣಗೆರೆ ಜಿಲ್ಲೆ, ದಾವಣಗೆರೆ**

**ಪ್ರ.ಸಂ. ಕಾಅದಾ : ಕಾನಪ : ಸಿಆರ್–80/2011, ದಿನಾಂಕ: 4ನೇ ಜುಲೈ 2011**

| ಅರ್ಜಿದಾರರು | ವಿರುದ್ಧ | ಪ್ರತಿವಾದಿಗಳು |
|---|---|---|
| 1) ಶ್ರೀಮತಿ ಸಭೀನಾ ಬಾನು @ ಸಭೀನಾ ಕೋಂ ಲೇಟ್ ದಾದಾಫೀರ್<br>2) ಗೌಸ್‌ಫೀರ್ ಬಿನ್ ಲೇಟ್ ದಾದಾಪೀರ್ (10 ವರ್ಷ)<br>3) ದಸ್ತಗೀರ್ ಬಿನ್ ಲೇಟ್ ದಾದಾಪೀರ್ (9 ವರ್ಷ)<br>4) ಗೌಸೀಯಾ ಬಿನ್ ಲೇಟ್ ದಾದಾಪೀರ್ (6 ವರ್ಷ)<br>5) ಸೈಯದ್ ಅಹಮದ್ ಬಿನ್ ಲೇಟ್ ದಾದಾಪೀರ್ (4 ವರ್ಷ)<br>6) ನಜ್ಬುನ್ನೀಸಾ @ ಜೆಬುನ್ನಿಸಾ ಕೋಂ ಲೇಟ್ ಅಬ್ದುಲ್ ರಜಾಕ್, ಬೀಡಿ ಲೇಔಟ್, 5ನೇ ಕ್ರಾಸ್, ದಾವಣಗೆರೆ | | 1) ಹಬೀಬುಲ್ಲಾ ಬಿನ್ ವಹಾಬ್‌ಸಾಬ್, ಟ್ರಕ್ ಮಾಲೀಕರು, ನಂ: ಕೆಎ.03/ಎ8283 #215, ಪಾರ್ವತಿ ಅಮ್ಮ ಕಾಲೋನಿ, ಮಾಗನಹಳ್ಳಿ ರಸ್ತೆ, ದಾವಣಗೆರೆ<br>2) ದಿ. ಮ್ಯಾನೇಜರ್, ಶ್ರೀರಾಮ ಜನರಲ್ ಇನ್ಸೂರೆನ್ಸ್ ಕಂ. ಲಿ., ಈ:8, ಎಡಿಪ್ ರಿಕೋ ಇಂಡಸ್ಟ್ರೀಯಲ್ ಏರಿಯಾ, ಸೀತಾಪುರ, ಜಯಪುರ, ರಾಜಸ್ಥಾನ ರಾಜ್ಯ |

**ಪ್ರಕಟಣೆ**

ಶ್ರೀ/ಶ್ರೀಮತಿ ಸಭೀನಾ ಬಾನು, ಗೌಸ್‌ಫೀರ್, ದಸ್ತಗೀರ್, ಗೌಸೀಯಾ, ಸೈಯದ್ ಅಹಮದ್, ನಜುನ್ನೀಸಾ ಇವರುಗಳಾದ ನಾವು ಮೃತ ದಾದಾಪೀರ್ ಇವರ ಹೆಂಡತಿ ಮಕ್ಕಳು ಮತ್ತು ತಾಯಿ ಎಂದೂ ಅವರ ಸಾವಿಗಾಗಿ ನಷ್ಟ ಪರಿಹಾರ ಕೋರಿ ಈ ನ್ಯಾಯಾಲಯದಲ್ಲಿ ಅರ್ಜಿ ಸಲ್ಲಿಸಿರುತ್ತಾರೆ. ಮೃತ ದಾದಾಪೀರ್ ರವರು ಒಂದನೇ ಪ್ರತಿವಾದಿಗಳಾದ ಹಬೀಬುಲ್ಲಾ ಇವರ ಟ್ರಕ್ ರಲ್ಲಿ ಹಮಾಲಿ ಆಗಿ ಕೆಲಸ ನಿರ್ವಹಿಸುತ್ತಿದ್ದಾಗ ಸಂಭವಿಸಿದ ಅಪಘಾತದಲ್ಲಿ ಮರಣ ಹೊಂದಿದರೆಂದೂ, ಸದರಿ ಅರ್ಜಿದಾರರು ತಿಳಿಸಿರುತ್ತಾರೆ. ಈ ಸಂಬಂಧವಾಗಿ ಈ ಪ್ರಕಟಣೆಯ ಮೂಲಕ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ತಿಳಿಸುವುದೇನೆಂದರೆ ಈ ಬಗ್ಗೆ ಏನಾದರೂ ಆಕ್ಷೇಪಣೆಗಳಾಗಲೀ ಅಥವಾ ಬೇರೆ ಯಾರಾದರೂ ಮೃತರ ಶಾಸನಬದ್ಧ ವಾರಸುದಾರರು ಎಂದು ಪರಿಗಣಿಸಬೇಕೆಂದು ಪ್ರಾರ್ಥಿಸುವುದಾದರೆ, ಅಂತಹವರು ಪ್ರಕಟಣೆಯು ಈ ನ್ಯಾಯಾಲಯದಲ್ಲಿ ನಾಮಫಲಕದಲ್ಲಿ ಪ್ರಕಟಿಸಿದ 30 ದಿನಗಳೊಳಗಾಗಿ ಅಂತಹ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಯನ್ನಾಗಲೀ ಈ ನ್ಯಾಯಾಲಯದಲ್ಲಿ ಸಲ್ಲಿಸತಕ್ಕದ್ದು. ಅವಧಿ ಮೀರಿ ಬಂದ ಅರ್ಜಿಗಳನ್ನು ಮಾನ್ಯ ಮಾಡಲಾಗುವುದಿಲ್ಲ.

ಕಾರ್ಮಿಕ ಅಧಿಕಾರಿ ಮತ್ತು ಅಯುಕ್ತರು
ಕಾರ್ಮಿಕ ನಷ್ಟ ಪರಿಹಾರ, ದಾವಣಗೆರೆ
ಜಿಲ್ಲೆ, ದಾವಣಗೆರೆ

**ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕರ ನಷ್ಟ ಪರಿಹಾರ ಆಯುಕ್ತರವರ ನ್ಯಾಯಾಲಯ, ದಾವಣಗೆರೆ ಜಿಲ್ಲೆ, ದಾವಣಗೆರೆ**

**ಪ್ರ.ಸಂ. ಕಾಅದಾ : ಕಾನಪ : ಸಿಆರ್–81/2010, ದಿನಾಂಕ: 4ನೇ ಜುಲೈ 2011**

| ಅರ್ಜಿದಾರರು | ವಿರುದ್ಧ | ಪ್ರತಿವಾದಿಗಳು |
|---|---|---|
| 1) ಶ್ರೀ ಕುಮಾರ ಮನೋಜ್ ಬಿನ್ ಲೇಟ್ ಸ್ವಾಮಿ ಕಣ್ಣು (2 ವರ್ಷ)<br>2) ಕು॥ ಹರೀ ಬಿನ್ ಸ್ವಾಮಿ ಕಣ್ಣು (1 ವರ್ಷ)<br>3) ಶ್ರೀಮತಿ ಈಶ್ವರಿ ಕೋಂ ಸ್ವಾಮಿ ಕಣ್ಣು<br>4) ಶ್ರೀಮತಿ ಶಿವಗಾಂಧಿ ಕೋಂ ಲೇಟ್ ರಾಮಣ್<br>ಕುಂಟೂರು ಗ್ರಾಮ ವೆಲ್ಲಾಕಲ್ಲನಾಥಂ (ಪೋ)<br>ಜಿಲ್ಲೆ, ತಮಿಳುನಾಡು ರಾಜ್ಯ | | 1) ದಿ ಮ್ಯಾನೇಜಿಂಗ್ ಡೈರೆಕ್ಟರ್ ವೆನ್‌ಸೂರ ಕನ್‌ಸ್ಟ್ರಾಕ್ಷನ್ ಕಂಪನಿ ಲಿ., ನಂ. 28, 1ನೇ ಮಹಡಿ ನವೋದಯ ಕಾಲೋನಿ 2ನೇ ಪಾರ್ಸ್, ಬಂಜಾರ್ ಹಿಲ್ಸ್, ಹೈದರಾಬಾದ್, ಆಂದ್ರಪ್ರದೇಶ |

**ಪ್ರಕಟಣೆ**

ಶ್ರೀ/ಶ್ರೀಮತಿ ಕುಮಾರ ಮನೋಜ್, ಕು॥ ಹರೀ, ಶ್ರೀಮತಿ ಈಶ್ವರಿ ಮತ್ತು ಶ್ರೀಮತಿ ಶಿವಗಾಂಧಿ ಇವರುಗಳಾದ ನಾವು ಮೃತ ಸ್ವಾಮಿಕಣ್ಣು ಇವರ ಮಕ್ಕಳು ಮತ್ತು ಹೆಂಡತಿ ಮತ್ತು ತಾಯಿ ಎಂದೂ ಅವರ ಸಾವಿಗಾಗಿ ನಷ್ಟ ಪರಿಹಾರ ಕೋರಿ ಈ ನ್ಯಾಯಾಲಯದಲ್ಲಿ ಅರ್ಜಿ ಸಲ್ಲಿಸಿರುತ್ತಾರೆ. ಮೃತ ಸ್ವಾಮಿಕಣ್ಣು ರವರು ಒಂದನೇ ಪ್ರತಿವಾದಿಗಳಾದ ದಿ ಮ್ಯಾನೇಜಿಂಗ್ ಡೈರೆಕ್ಟರ್ ಇವರ ಕನ್‌ಸ್ಟ್ರಕ್ಷನ್ ರಲ್ಲಿ ಎಲೆಕ್ಟ್ರಿಷಿಯನ್ ಆಗಿ ಕೆಲಸ ನಿರ್ವಹಿಸುತ್ತಿದ್ದಾಗ ಸಂಭವಿಸಿದ ಅಪಘಾತದಲ್ಲಿ ಮರಣ ಹೊಂದಿದರೆಂದೂ, ಸದರಿ ಅರ್ಜಿದಾರರು ತಿಳಿಸಿರುತ್ತಾರೆ. ಈ ಸಂಬಂಧವಾಗಿ ಈ ಪ್ರಕಟಣೆಯ ಮೂಲಕ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ತಿಳಿಸುವುದೇನೆಂದರೆ ಈ ಬಗ್ಗೆ ಏನಾದರೂ ಆಕ್ಷೇಪಣೆಗಳಾಗಲೀ ಅಥವಾ ಬೇರೆ ಯಾರಾದರೂ ಮೃತರ ಶಾಸನಬದ್ಧ ವಾರಸುದಾರರು ಎಂದು ಪರಿಗಣಿಸಬೇಕೆಂದು ಪ್ರಾರ್ಥಿಸುವುದಾದರೆ, ಅಂತಹವರು ಪ್ರಕಟಣೆಯು ಈ ನ್ಯಾಯಾಲಯದಲ್ಲಿ ನಾಮಫಲಕದಲ್ಲಿ ಪ್ರಕಟಿಸಿದ 30 ದಿನಗಳೊಳಗಾಗಿ ಅಂತಹ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಯನ್ನಾಗಲೀ ಈ ನ್ಯಾಯಾಲಯದಲ್ಲಿ ಸಲ್ಲಿಸತಕ್ಕದ್ದು. ಅವಧಿ ಮೀರಿ ಬಂದ ಅರ್ಜಿಗಳನ್ನು ಮಾನ್ಯ ಮಾಡಲಾಗುವುದಿಲ್ಲ.

ಕಾರ್ಮಿಕ ಅಧಿಕಾರಿ ಮತ್ತು ಅಯುಕ್ತರು ಕಾರ್ಮಿಕ
ನಷ್ಟ ಪರಿಹಾರ, ದಾವಣಗೆರೆ ಜಿಲ್ಲೆ, ದಾವಣಗೆರೆ

**ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕರ ನಷ್ಟ ಪರಿಹಾರ ಆಯುಕ್ತರವರ ನ್ಯಾಯಾಲಯ, ದಾವಣಗೆರೆ ಜಿಲ್ಲೆ, ದಾವಣಗೆರೆ**

**ಪ್ರ.ಸಂ. ಕಾಅದಾ : ಕಾನಪ : ಸಿಆರ್–97/2011, ದಿನಾಂಕ: 3ನೇ ಜುಲೈ 2010**

| ಅರ್ಜಿದಾರರು | ಪ್ರತಿವಾದಿಗಳು |
|---|---|
| ಶ್ರೀಮತಿ ಕರಿಬಸಮ್ಮ ಕೋಂ ಲೇಟ್ ಸಿದ್ದಪ್ಪ, ಮಸದಿ ಗ್ರಾಮ, ಹೊನ್ನಾಳಿ ತಾಲ್ಲೂಕ್, ದಾವಣಗೆರೆ ಜಿಲ್ಲೆ | 1) ದಿ ಜನರಲ್ ಮ್ಯಾನೇಜರ್, ಸಿಂಹಾಪುರಿ ಆಗ್ರೋಟೇಕ್ ಕಂ. ಪ್ರೈ. ಲಿ., ನಂ. 263, ಪರಂಜ್ಯೋತಿ ನಿಲಯ, ಪಿಡಬ್ಲ್ಯೂಡಿ. ಅಮರಾವತಿ, ಅಮರಾವತಿ ಕಾಲೇಜ್ ರಸ್ತೆ, ಹೊಸಪೇಟೆ<br>2) ಸಿ.ಬಿ.ಕೆ., ಬಿ.ಹೆಚ್.ಆರ್.ಡಿ. ಬಿಡಿವಿಪಿ ಶ್ರೀ ಶೇಶಚಲ ಮೂರ್ತಿ ಅರ್ಚಕ ಬಿನ್ ರಾಮಾಂಜನೇಯ ಲಾರಿ ಮಾಲೀಕರು, ನಂ. ಕೆಎ 14, ಎ–2701, ರೈಲ್ವೆ ಗೇಟ್ ಹತ್ತಿರ, ಕಡದಕಟ್ಟೆ ಗ್ರಾಮ, ಭದ್ರಾವತಿ ತಾಲ್ಲೂಕು,<br>3) ದಿ ಜನರಲ್ ಮ್ಯಾನೇಜರ್, ಯುನೈಟೆಡ್ ಇಂಡಿಯಾ ಇನ್ಸೂರೆನ್ಸ್ ಕಂ.ಲಿ., ಪಿ.ಬಿ. ನಂ. 123, ಚನ್ನಗಿರಿ ರಸ್ತೆ, ಭದ್ರಾವತಿ |

**ಪ್ರಕಟಣೆ**

ಶ್ರೀ/ಶ್ರೀಮತಿ ಕರಿಬಸಮ್ಮ, ಇವರುಗಳಾದ ನಾವು ಮೃತ ವಸಂತಕುಮಾರ್ ಇವರ ತಾಯಿ ಎಂದೂ ಅವರ ಸಾವಿಗಾಗಿ ನಷ್ಟ ಪರಿಹಾರ ಕೋರಿ ಈ ನ್ಯಾಯಾಲಯದಲ್ಲಿ ಅರ್ಜಿ ಸಲ್ಲಿಸಿರುತ್ತಾರೆ. ಮೃತ ವಸಂತಕುಮಾರ್ ರವರು ಒಂದನೇ ಪ್ರತಿವಾದಿಗಳಾದ ಶೇಶಚಲಮೂರ್ತಿ ಆರ್ಚಕ ಇವರ ಲಾರಿ ರಲ್ಲಿ ಹಮಾಲಿ ಆಗಿ ಕೆಲಸ ನಿರ್ವಹಿಸುತ್ತಿದ್ದಾಗ ಸಂಭವಿಸಿದ ಅಪಘಾತದಲ್ಲಿ ಮರಣ ಹೊಂದಿದರೆಂದೂ, ಸದರಿ ಅರ್ಜಿದಾರರು ತಿಳಿಸಿರುತ್ತಾರೆ. ಈ ಸಂಬಂಧವಾಗಿ ಈ ಪ್ರಕಟಣೆಯ ಮೂಲಕ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ತಿಳಿಸುವುದೇನೆಂದರೆ ಈ ಬಗ್ಗೆ ಏನಾದರೂ ಆಕ್ಷೇಪಣೆಗಳಾಗಲೀ ಅಥವಾ ಬೇರೆ ಯಾರಾದರೂ ಮೃತರ ಶಾಸನಬದ್ಧ ವಾರಸುದಾರರು ಎಂದು ಪರಿಗಣಿಸಬೇಕೆಂದು ಪ್ರಾರ್ಥಿಸುವುದಾದರೆ, ಅಂತಹವರು ಪ್ರಕಟಣೆಯು ಈ ನ್ಯಾಯಾಲಯದಲ್ಲಿ ನಾಮಫಲಕದಲ್ಲಿ ಪ್ರಕಟಿಸಿದ 30 ದಿನಗಳೊಳಗಾಗಿ ಅಂತಹ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಯನ್ನಾಗಲೀ ಈ ನ್ಯಾಯಾಲಯದಲ್ಲಿ ಸಲ್ಲಿಸತಕ್ಕದ್ದು. ಅವಧಿ ಮೀರಿ ಬಂದ ಅರ್ಜಿಗಳನ್ನು ಮಾನ್ಯ ಮಾಡಲಾಗುವುದಿಲ್ಲ.

**ಎಸ್. ಸಿ. ರಾಮಚಂದ್ರ,**
ಕಾರ್ಮಿಕ ಅಧಿಕಾರಿ ಮತ್ತು ಅಯುಕ್ತರು ಕಾರ್ಮಿಕ
ನಷ್ಟ ಪರಿಹಾರ, ದಾವಣಗೆರೆ ಜಿಲ್ಲೆ, ದಾವಣಗೆರೆ

**ಪಿ.ಆರ್. 694**

## DIRECTORATE OF ECONOMICS AND STATISTICS, BANGALORE-1

**Consumer Price Index Numbers for Industrial Workers.**

No.DES 10 PWX 2011 Month: May 2011

State· Karnataka Base· 1987-88=1 00 Date· 05-07-2011

| | Group/Sub-Group | Bellary | Bhadravathi | Davangere | Dandeli | Gulbarga | Harihar | Hassan | Mandya | Mangalore | Raichur | Tumkur |
|---|---|---|---|---|---|---|---|---|---|---|---|---|
| | 1 | 2 | 3 | 4 | 5 | 6 | 7 | 8 | 9 | 10 | 11 | 12 |
| I. | **FOOD:** | | | | | | | | | | | |
| | (a) Cereals & Products | 628 | 625 | 722 | 668 | 642 | 605 | 614 | 633 | 552 | 705 | 617 |
| | (b) Pulses & Products | 572 | 635 | 665 | 747 | 568 | 622 | 648 | 622 | 656 | 644 | 623 |
| | (c) Oil & Fats | 347 | 352 | 368 | 362 | 379 | 384 | 385 | 391 | 312 | 354 | 373 |
| | (d) Meat, Fish & Eggs | 711 | 618 | 762 | 564 | 759 | 771 | 665 | 751 | 1025 | 802 | 686 |
| | (e) Milk & Products | 456 | 462 | 542 | 552 | 516 | 601 | 473 | 562 | 478 | 509 | 457 |
| | (f) Condiments & Spices | 562 | 582 | 738 | 788 | 504 | 468 | 506 | 519 | 541 | 652 | 555 |
| | (g) Vegetables & Fruits | 531 | 523 | 633 | 646 | 528 | 542 | 580 | 559 | 464 | 458 | 697 |
| | (h) Other Food | 494 | 728 | 587 | 635 | 522 | 489 | 530 | 535 | 445 | 493 | 530 |
| | **FOOD GROUP INDEX** | 560 | 591 | 650 | 629 | 568 | 564 | 565 | 602 | 583 | 610 | 571 |
| **II.** | Pan, Supari, Tobacco & Intoxicants | 497 | 621 | 595 | 458 | 405 | 537 | 617 | 509 | 380 | 467 | 628 |
| **III.** | Fuel & Light | 422 | 406 | 473 | 613 | 494 | 462 | 468 | 548 | 377 | 615 | 374 |
| **IV.** | Housing | 100 | 100 | 100 | 100 | 100 | 100 | 100 | 100 | 100 | 100 | 100 |
| **V.** | Clothing, Bedding & Footwear | 279 | 313 | 351 | 390 | 338 | 276 | 447 | 566 | 275 | 607 | 234 |
| **VI.** | **Miscellaneous:** | | | | | | | | | | | |
| | (a) Medical Care | 663 | 870 | 489 | 457 | 359 | 252 | 456 | 389 | 352 | 429 | 262 |
| | 1 | 2 | 3 | 4 | 5 | 6 | 7 | 8 | 9 | 10 | 11 | 12 |
| | (b) Education, Recreation & Amusement | 571 | 508 | 767 | 264 | 470 | 472 | 563 | 466 | 667 | 750 | 548 |
| | (c) Transport & Communication | 557 | 567 | 544 | 397 | 574 | 565 | 505 | 576 | 466 | 494 | 509 |
| | (d) Personal Care & effects | 337 | 378 | 446 | 370 | 403 | 339 | 360 | 375 | 368 | 340 | 362 |
| | (e) Others | 396 | 449 | 485 | 477 | 372 | 304 | 370 | 470 | 320 | 577 | 341 |
| | Miscellaneous Group | 473 | 494 | 534 | 393 | 420 | 353 | 433 | 447 | 421 | 507 | 391 |
| | **GENERAL INDEX** | 459 | 477 | 523 | 500 | 448 | 432 | 480 | 510 | 468 | 533 | 408 |
| | To convert to Base 1960 Multiply by Linking Factor. | 7.39 | 9.19 | 8.27 | - | 8.26 | 8.56 | 9.25 | 7.92 | 9.31 | - | - |

**for Director**

**GOVERNMENT OF INDIA**

**MINISTRY OF LABOUR**

**LABOUR BUREAU**

CONSUMER PRICE INDEX NUMBERS FOR INDUSTRIAL WORKERS (BASE - 2001=100)

'Cleremont' Shimla. 171004

MONTH: May, 2011

| Group / Sub-group/ /Centre | BANGALORE | BELGAUM | HUBLI/ DHARWAD | MERCARA | MYSORE |
|---|---|---|---|---|---|
| Food | | | | | |
| (a) Cereals & Products | 182 | 230 | 204 | 192 | 174 |
| (b) Pulses and & Products | 220 | 213 | 235 | 212 | 209 |
| (c) Oils & Fats | 205 | 213 | 203 | 203 | 199 |
| (d) Meat, Fish & Eggs | 244 | 271 | 263 | 219 | 240 |
| (e) Milk&Products | 194 | 194 | 168 | 186 | 197 |
| (f) Condiments & Spices | 203 | 187 | 219 | 192 | 200 |
| (g) Vegitables & Fruits | 202 | 250 | 234 | 210 | 222 |
| (h) Other Foods | 225 | 199 | 197 | 198 | 205 |
| FOOD GROUP | 205 | 219 | 208 | 200 | 200 |
| Pan, Supari, Tobacco & Intoxicar | 190 | 209 | 201 | 159 | 198 |
| Fuel and Light | 142 | 158 | 156 | 263 | 154 |
| Housing Index | 201 | 194 | 221 | 101 | 204 |
| Clothing, Bedding and Footware | 123 | 133 | 142 | 136 | 148 |
| Miscellaneous | | | | | |
| (a) Medical care | 171 | 169 | 146 | 165 | 142 |
| (b) Education, Recreation & Amusement | 171 | 155 | 194 | 175 | 115 |
| (c) Transport and Communication | 229 | 238 | 242 | 192 | 201 |
| (d) Personal Care & Effects | 176 | 155 | 170 | 164 | 158 |
| (e) Others | 185 | 174 | 146 | 190 | 188 |
| Miscellaneous Group | 191 | 177 | 180 | 176 | 158 |
| General Index | 192 | 198 | 197 | 185 | 185 |

**J.K. Kaith,**
Economic Officer

**P.R. No. 695**

## ಸಹಕಾರ ಇಲಾಖೆ

### ಸಹಕಾರ ಸಂಘಗಳ ಉಪನಿಬಂಧಕರವರು ದಾವಣಗೆರೆ ಜಿಲ್ಲೆ, ದಾವಣಗೆರೆ ಇವರ ಕಛೇರಿಯ ನಡವಳಿಗಳು

**ವಿಷಯ:** ಸಮಾಪನೆಗೊಂಡಿರುವ ಹಾಲು ಉತ್ಪಾದಕರ ಸಹಕಾರ ಸಂಘ, ನಿ., ಹಲವಾಗಲು, ಹರಪನಹಳ್ಳಿ-ತಾಲ್ಲೂಕು ಇದರ ನೋಂದಣಿಯನ್ನು ರದ್ದು ಪಡಿಸುವ ಕುರಿತು

**ಉಲ್ಲೇಖ:**

1. ಸಹಕಾರ ಸಂಘಗಳ ಉಪ ನಿಬಂಧಕರು, ಬಳ್ಳಾರಿ, ಇವರ ಆದೇಶ ಸಂಖ್ಯೆ : ಉನಿಅ/ವಿ10/ಎಲ್‌ಕ್ಯೂಡಿ/ ಸಿಆರ್-14/1995-96, ದಿನಾಂಕ : 28-01-1996

2. ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಹರಪನಹಳ್ಳಿ ಉಪವಿಭಾಗ, ಹರಪನಹಳ್ಳಿ ಇವರ ಪತ್ರ ಸಂ: ಸನಿ/ ಹೆಚ್‌ಆರ್‌ಪಿ/ಸಮಾಪನೆ/ಸಿಆರ್-/10-11, ದಿನಾಂಕ: 28-06-2011.

**ಪ್ರಸ್ತಾವನೆ:**

ಮೇಲ್ಕಂಡ ವಿಷಯ ಮತ್ತು ಉಲ್ಲೇಖಗಳಿಗೆ ಸಂಬಂಧಿಸಿದಂತೆ, ಈ ಮೇಲ್ಕಂಡ ಸಹಕಾರ ಸಂಘವು ನೋಂದಣಿ ಸಂಖ್ಯೆ: ಸನಿ–23/6488/1989–90, ದಿನಾಂಕ : 25–06–1990 ರಲ್ಲಿ ನೋಂದಣಿಯಾಗಿರುತ್ತದೆ. ಸಂಘದ ಕಾರ್ಯಚಟುವಟಿಕೆಗಳು ಪೂರ್ಣವಾಗಿ ಸ್ಥಗಿತ ಗೊಂಡಿದ್ದರಿಂದ, ಈ ಸಂಘವನ್ನು ಮುಂದುವರಿಸಿಕೊಂಡು ಹೋಗುವುದು ಸೂಕ್ತವಲ್ಲವೆಂದು ಭಾವಿಸಿ, ಉಲ್ಲೇಖ (1)ರಲ್ಲಿ ಸಹಕಾರ ಸಂಘಗಳ ಉಪ ನಿಬಂಧಕರು, ಬಳ್ಳಾರಿ ಜಿಲ್ಲೆ, ಬಳ್ಳಾರಿ ಇವರು ದಿನಾಂಕ: 28–01–1996 ರ ಆದೇಶದಲ್ಲಿ ಸಮಾಪನೆಗೊಳಿಸಿ ಸಹಕಾರ ಅಭಿವೃದ್ಧಿ ಅಧಿಕಾರಿಗಳು, ಹರಪನಹಳ್ಳಿ, ಇವರನ್ನು ಸಮಾಪನಾಧಿಕಾರಿಯನ್ನಾಗಿ ನೇಮಿಸಲಾಗಿದೆ. ಸಮಾಪನಾಧಿಕಾರಿಗಳು ಸಂಘದ ಆಸ್ತಿ ಮತ್ತು ಜವಾಬ್ದಾರಿಗಳನ್ನು ವಿಲೇಮಾಡಿ ಶೂನ್ಯಗೊಳಿಸಿ ಸಂಘದ ನೋಂದಣಿಯನ್ನು ರದ್ದುಗೊಳಿಸಲು ಉಲ್ಲೇಖ (2)ರ ರೀತ್ಯಾ ಸಹಕಾರ ಸಂಘಗಳ ಸಹಾಯಕ ನಿಬಂಧಕರು ಹರಪನಹಳ್ಳಿ ಇವರ ಮುಖಾಂತರ ಪ್ರಸ್ತಾವನೆ ಸಲ್ಲಿಸಿರುತ್ತಾರೆ. ಈ ಅಂಶಗಳನ್ನು ಪರಿಗಣಿಸಿ ಈ ಕೆಳಕಂಡ ಆದೇಶ ಹೊರಡಿಸಲಾಗಿದೆ.

**ಆದೇಶ**

**ನಂ: ಡಿಆರ್:ಡಿವಿಜಿ:/ಸಮಾಪನೆ/ನೋಸಂರ/ಸಿಆರ್– /2010–11, ದಿನಾಂಕ: 30–06–2011**

ಪ್ರಸ್ತಾವನೆಯಲ್ಲಿನ ಅಂಶಗಳನ್ನು ಪರಿಗಣಿಸಿ, ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 75ರನ್ವಯ ಹಾಗೂ ಸರ್ಕಾರದ ಅಧಿಸೂಚನೆ ಸಂ: ಸಿಎಂಡಬ್ಲ್ಯೂ :69: ಸಿಎಲ್‌ಎಂ:2001 ದಿನಾಂಕ: 21–11–2001ರ ಪ್ರಕಾರ ದತ್ತವಾದ ಅಧಿಕಾರದನ್ವಯ ದಾವಣಗೆರೆ ಜಿಲ್ಲಾ ಸಹಕಾರ ಸಂಘಗಳ ಉಪ ನಿಬಂಧಕರು, ಬಿ. ಕುಬೇರಪ್ಪ, ಕೆ.ಸಿ.ಎಸ್. ಆದ ನಾನು ಸಮಾಪನೆಗೊಂಡ ಹಾಲು ಉತ್ಪಾದಕರ ಸಹಕಾರ ಸಂಘ ನಿ, ಹಲವಾಗಲು, ಹರಪನಹಳ್ಳಿ–ತಾಲ್ಲೂಕು ಇದರ ನೋಂದಣಿಯನ್ನು ರದ್ದುಗೊಳಿಸಿ ಆದೇಶ ಹೊರಡಿಸಿರುತ್ತೇನೆ. ಈ ರದ್ಧತಿಯ ಆದೇಶದ ದಿನಾಂಕದಿಂದ ಸದರಿ ಸಹಕಾರ ಸಂಘದ ಕಾರ್ಯ ಚಟುವಟಿಕೆಗಳು ನಿಂತು ಹೋಗಿರುತ್ತವೆಂದು ಭಾವಿಸಲ್ಪಡತಕ್ಕದ್ದು. ಈ ಸಂಘವು ಅಸ್ತಿತ್ವದಲ್ಲಿರುವುದಿಲ್ಲವೆಂದು ಪರಿಗಣಿಸತಕ್ಕದ್ದು ಹಾಗೂ ಕರ್ನಾಟಕ ಸಹಕಾರ ಸಂಘಗಳ ನಿಯಮಗಳು 1960 ರ ನಿಯಮ 33(ಎನ್) ರನ್ವಯ ಈ ಸಂಘದ ದಾಖಲಾತಿಗಳನ್ನು ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಹರಪನಹಳ್ಳಿ ಇವರ ಕಚೇರಿಯಲ್ಲಿಡಲು ಆದೇಶಿಸಿದೆ.

ನನ್ನ ಸ್ವಸಹಿ ಮತ್ತು ಕಛೇರಿಯ ಮೊಹರಿನೊಂದಿಗೆ ಈ ದಿನ ದಿನಾಂಕ: 30–06–2011 ರಂದು ಈ ಆದೇಶವನ್ನು ಹೊರಡಿಸಿರುತ್ತೇನೆ.

ಸಹಕಾರ ಸಂಘಗಳ ಉಪ ನಿಬಂಧಕರು,
ದಾವಣಗೆರೆ ಜಿಲ್ಲೆ, ದಾವಣಗೆರೆ.

**ಪಿ.ಆರ್. 696**

**ಸಹಕಾರ ಇಲಾಖೆ**

**ಸಹಕಾರ ಸಂಘಗಳ ಉಪ ನಿಬಂಧಕರು, ದಾವಣಗೆರೆ ಜಿಲ್ಲೆ, ದಾವಣಗೆರೆ ಇವರ ಕಾರ್ಯಾಲಯ**

**ವಿಷಯ :** ಸಮಾಪನೆಗೊಂಡಿರುವ ಮತ್ತಿ ಕ್ಯಾಂಪ್ ಹಾಲು ಉತ್ಪಾದಕರ ಸಹಕಾರ ಸಂಘ ನಿ, ಮತ್ತಿ ಕ್ಯಾಂಪ್, ದಾವಣಗೆರೆ ತಾಲ್ಲೂಕು ಇದನ್ನು ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ ಕಲಂ 72(3) ರನ್ವಯ ಪುನಃಶ್ಚೇತನಗೊಳಿಸುವ ಬಗ್ಗೆ.

**ಉಲ್ಲೇಖ:** 1) ಈ ಕಚೇರಿ ಪತ್ರ ಸಮಸಂಖ್ಯೆ:ಡಿಆರ್/ಡಿವಿಜಿ/ಎಲ್‌ಕ್ಯೂಡಿ/ಸಿಆರ್–20/2008–09, ದಿನಾಂಕ:20–07–2009 ಮತ್ತು ದಿನಾಂಕ : 13–08–2010

2) ಸಹಕಾರ ಸಂಘಗಳ ಸಹಾಯಕ ನಿಬಂಧಕರು, ದಾವಣಗೆರೆ ಇವರ ಪತ್ರ ದಿನಾಂಕ: 15–06–2011.

3) ವ್ಯವಸ್ಥಾಪಕರು, (ಶೇಮತಾಂ) ಶಿವಮೊಗ್ಗ ಸಹಕಾರಿ ಹಾಲು ಉತ್ಪಾದಕರ ಸಂಘಗಳ ಒಕ್ಕೂಟ ನಿ., ಶಿವಮೊಗ್ಗ, ಇವರ ಪತ್ರ ದಿನಾಂಕ : 25–04–2011

**ಪ್ರಸ್ತಾವನೆ:**

ಪ್ರಸ್ತುತ ವಿಷಯ ಮತ್ತು ಉಲ್ಲೇಖಕ್ಕೆ ಸಂಬಂಧಿಸಿದಂತೆ, ವಿಷಯ ಸೂಚಿತ ಸಂಘವು ಕಳೆದ ಹಲವಾರು ವರ್ಷಗಳಿಂದ ಸ್ಥಗಿತಗೊಂಡಿದ್ದ ಕಾರಣ ಉಲ್ಲೇಖ (1)ರ ಆದೇಶದ ರೀತ್ಯಾ ಸಮಾಪನೆಗೊಳಿಸಿ ಸಹಕಾರ ಸಂಘಗಳ ನಿರೀಕ್ಷಕರು, 2ನೇ ವೃತ್ತ, ದಾವಣಗೆರೆ ಇವರನ್ನು ಸಮಾಪನಾಧಿಕಾರಿಯನ್ನಾಗಿ ನೇಮಕ ಮಾಡಲಾಗಿತ್ತು. ನಂತರ ದಿನಾಂಕ : 13–08–2010ರ ಈ ಕಚೇರಿ ಆದೇಶದಲ್ಲಿ ಶ್ರೀ ಟಿ. ಚನ್ನಬಸಪ್ಪ, ಸಹಕಾರ ಸಂಘಗಳ ಹಿರಿಯ ನಿರೀಕ್ಷಕರು, ಸಹಕಾರ ಸಂಘಗಳ ಸಹಾಯಕ ನಿಬಂಧಕರ ಕಚೇರಿ ಹರಪನಹಳ್ಳಿ ಇವರನ್ನು ಸಮಾಪನಾಧಿಕಾರಿಯನ್ನಾಗಿ ನೇಮಿಸಲಾಯಿತು. ಸಮಾಪನಾಧಿಕಾರಿಗಳು ಸಮಾಪನಾ ಕಾರ್ಯವನ್ನು ಪೂರ್ಣಗೊಳಿಸುವ ಪೂರ್ವದಲ್ಲಿ, ಸಂಘದ ಸದಸ್ಯರು ದಿನಾಂಕ : 27–04–2011 ರಂದು ಸಭೆ ಸೇರಿ ಸಂಘವನ್ನು ಪುನಃಶ್ಚೇತನಗೊಳಿಸಿಕೊಂಡು ಕಾರ್ಯನಿರ್ವಹಿಸಲು ತೀರ್ಮಾನಿಸಿ ಅದರಂತೆ ಐದು ವರ್ಷಗಳ ಕ್ರಿಯಾಯೋಜನೆಯನ್ನು ರೂಪಿಸಿಕೊಂಡಿರುತ್ತಾರೆ. ಇದೇ ಅಂಶವನ್ನು ಸಹಕಾರ ಸಂಘಗಳ ಸಹಾಯಕ ನಿಬಂಧಕರು ದಾವಣಗೆರೆ ಇವರು, ಉಲ್ಲೇಖ 2ರ ಪತ್ರದಲ್ಲಿ ಶಿಫಾರಸ್ಸು ಮಾಡಿರುತ್ತಾರೆ. ಅಲ್ಲದೆ, ವ್ಯವಸ್ಥಾಪಕರು (ಶೇಮತಾಂ), ಶಿವಮೊಗ್ಗ ಸಹಕಾರಿ ಹಾಲು ಉತ್ಪಾದಕರ ಸಂಘಗಳ ಒಕ್ಕೂಟ ನಿ., ಶಿವಮೊಗ್ಗ, ಇವರು ಸಹ ದಿನಾಂಕ : 25–04–2011ರ ಪತ್ರದಲ್ಲಿ ಸದರಿ ಸಂಘವನ್ನು ಪುನ:ಶ್ಚೇತನಗೊಳಿಸಲು ಶಿಫಾರಸ್ಸು ಮಾಡಿರುತ್ತಾರೆ. ದಿನಾಂಕ :

27–04–2011ರ ಸಭೆಯಲ್ಲಿ ಕೈಗೊಂಡಿರುವ ನಿರ್ಣಯದಂತೆ ಸಂಘವು ಕಾರ್ಯನಿರ್ವಹಿಸುವಂತೆ ಸ್ಥಳದ ವಿವರ ಸಂಘದ ನಾಮಫಲಕ ಇಲಾಖೆಗೆ ಸಲ್ಲಿಸಬೇಕಾದ ಮಾಹಿತಿಗಳನ್ನು ಸಹಕಾರ ಸಂಘಗಳ ನಿರೀಕ್ಷಕರು, 2ನೇ ವೃತ್ತ, ದಾವಣಗೆರೆ, ಇವರ ಮೂಲಕ ಸಲ್ಲಿಸುವಂತೆ ಸೂಚಿಸುತ್ತಾ ಮತ್ತು ಸಂಘದ ಸದಸ್ಯರು ಹಾಕಿಕೊಂಡಿರುವ ಕ್ರಿಯಾ ಯೋಜನೆ ಪ್ರಕಾರ ಪ್ರತಿ ಆರು ತಿಂಗಳಿಗೊಮ್ಮೆ ಗುರಿ ಸಾಧನೆಯ ಪ್ರಗತಿ ತ:ಖ್ತೆಯನ್ನು ಈ ಕಚೇರಿಗೂ ಹಾಗೂ ಸಹಕಾರ ಸಂಘಗಳ ಸಹಾಯಕ ನಿಬಂಧಕರು, ದಾವಣಗೆರೆ ಇವರ ಕಚೇರಿಗೂ ಸಲ್ಲಿಸುವಂತೆ ಸೂಚಿಸುತ್ತಾ ಈ ಮೇಲ್ಕಂಡ ಎಲ್ಲಾ ಅಂಶಗಳನ್ನು ಪರಿಗಣಿಸಿ ಸಂಘವನ್ನು ಪುನಃಶ್ಚೇತನಗೊಳಿಸಲು ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಆದೇಶ**

**ಸಂಖ್ಯೆ:ಡಿಆರ್:ಡಿವಿಜಿ:/ಪುನಃಶ್ಚೇತನ/ಸಿಆರ್–20/2008–09, ದಿನಾಂಕ: 30ನೇ ಜೂನ್ 2011**

ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959 ರ ಕಲಂ 72(3) ಹಾಗೂ ಕರ್ನಾಟಕ ಸರ್ಕಾರದ ಅಧಿಸೂಚನೆ ಸಂಖ್ಯೆ:ಸಿಎಂಡಬ್ಲ್ಯೂ:69: ಸಿಎಲ್ಎಂ:2001, ದಿನಾಂಕ:21–11–2001 ರನ್ವಯ ದತ್ತವಾಗಿರುವ ಅಧಿಕಾರವನ್ನು ಚಲಾಯಿಸಿ ಬಿ. ಕುಬೇರಪ್ಪ, ಕೆ.ಸಿ.ಎಸ್. ಸಹಕಾರ ಸಂಘಗಳ ಉಪ ನಿಬಂಧಕರು, ದಾವಣಗೆರೆ ಜಿಲ್ಲೆ, ಆದ ನಾನು ಸಮಾಪನೆಗೊಂಡಿರುವ ಮತ್ತಿ ಕ್ಯಾಂಪ್ ಹಾಲು ಉತ್ಪಾದಕರ ಸಹಕಾರ ಸಂಘ ನಿ, ಮತ್ತಿ ಕ್ಯಾಂಪ್, ದಾವಣಗೆರೆ ತಾಲ್ಲೂಕು ಇದರ ಉಲ್ಲೇಖ (1)ರ ಸಮಾಪನಾ ಆದೇಶವನ್ನು ರದ್ದುಗೊಳಿಸಿ ಈ ಸಂಘವನ್ನು ಮುಂದುವರಿಸಿಕೊಂಡು ಹೋಗಲು ಅವಕಾಶ ನೀಡುತ್ತಾ ಈ ಮೂಲಕ ಸಂಘವನ್ನು ಈ ಕೆಳಕಂಡ ಷರತ್ತುಗೊಳಪಡಿಸಿ ಪುನಃಶ್ಚೇತನಕ್ಕಾಗಿ ಆದೇಶಿಸಿರುತ್ತೇನೆ.

**ಷರತ್ತುಗಳು**

1. ಪುನ:ಶ್ಚೇತನಗೊಂಡ 6 ತಿಂಗಳ ಒಳಗಾಗಿ ಲೆಕ್ಕಪರಿಶೋಧನೆ ಮಾಡಿಸಿ ಸದರಿ ವರದಿಯನ್ನು ಈ ಕಚೇರಿಗೆ ಸಲ್ಲಿಸುವುದು.
2. ಕ್ರಿಯಾಯೋಜನಾ ರೀತ್ಯಾ ಕಾರ್ಯಕ್ರಮ ಹಮ್ಮಿಕೊಂಡು ಪ್ರಗತಿ ಸಾಧಿಸುವುದು.
3. ಡಿ.ಡಿ.ಸಿ.ಸಿ. ಬ್ಯಾಂಕ್ ನೊಂದಿಗೆ ವ್ಯವಹಾರ ಮಾಡತಕ್ಕದ್ದು. ಒಂದು ವೇಳೆ ಷರತ್ತಿಗನುಗುಣವಾಗಿ 6 ತಿಂಗಳ ನಂತರ ಯಾವುದೇ ಪ್ರಗತಿ ಸಾಧಿಸದಿದ್ದಲ್ಲಿ ಸಂಘವನ್ನು ನೇರವಾಗಿ ಸಮಾಪನೆಗೊಳಿಸುವುದು.

ಸಂಘದ ಪ್ರಥಮ ಮಹಾಸಭೆಯನ್ನು ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ ಮತ್ತು ನಿಯಮಗಳ ಪ್ರಕಾರ ಜರುಗಿಸಲು ಸಂಘದ ಸಮಾಪನಾಧಿಕಾರಿಗೆ ಸೂಚಿಸಿದೆ. ಹಾಗೂ ನೂತನ ಆಡಳಿತ ಮಂಡಳಿಯನ್ನು ರಚಿಸಲು ಶ್ರೀ.ಟಿ. ಚನ್ನಬಸಪ್ಪ, ಸಹಕಾರ ಸಂಘಗಳ ಹಿರಿಯ ನಿರೀಕ್ಷಕರು, ಸಹಕಾರ ಸಂಘಗಳ ಸಹಾಯಕ ನಿಬಂಧಕರ ಕಚೇರಿ, ಹರಪನಹಳ್ಳಿ, ಇವರನ್ನು ಚುನಾವಣಾಧಿಕಾರಿಯನ್ನಾಗಿ ನೇಮಕ ಮಾಡಿರುತ್ತೇನೆ. ಚುನಾವಣಾಧಿಕಾರಿಗಳು, ಚುನಾವಣಾ ಕಾರ್ಯವನ್ನು ಜರುಗಿಸಿ ಹಾಗೂ ಮಹಾಸಭೆಯಲ್ಲಿ ಹಾಜರಾಗಿ ಈ ಕಛೇರಿಗೆ ವರದಿ ಮಾಡಲು ಆದೇಶಿಸಿದೆ.

ಈ ಆದೇಶವನ್ನು ನನ್ನ ಸ್ವಸಹಿ ಮತ್ತು ಕಛೇರಿಯ ಮೊಹರಿನೊಂದಿಗೆ ಈ ದಿನ ದಿನಾಂಕ: 30–06–2011 ರಂದು ಹೊರಡಿಸಿರುತ್ತೇನೆ.

ಸಹಕಾರ ಸಂಘಗಳ ಉಪ ನಿಬಂಧಕರು

**ಪಿ.ಆರ್. 697** ದಾವಣಗೆರೆ ಜಿಲ್ಲೆ, ದಾವಣಗೆರೆ.

**ಸಹಕಾರ ಇಲಾಖೆ**

**ಸಹಕಾರ ಸಂಘಗಳ ಉಪನಿಬಂಧಕರವರು ದಾವಣಗೆರೆ ಜಿಲ್ಲೆ, ದಾವಣಗೆರೆ ಇವರ ಕಛೇರಿಯ ನಡವಳಿಗಳು**

**ವಿಷಯ:** ಸಮಾಪನೆಗೊಂಡಿರುವ ಹಾಲು ಉತ್ಪಾದಕರ ಮಹಿಳಾ ಸಹಕಾರ ಸಂಘ, ನಿ., ಗಿರಿಯಾಪುರ, ದಾವಣಗೆರೆ ತಾಲ್ಲೂಕು ಇದರ ನೋಂದಣಿಯನ್ನು ರದ್ದು ಪಡಿಸುವ ಕುರಿತು

**ಉಲ್ಲೇಖ:** 1. ಈ ಕಚೇರಿ ಆದೇಶ ಸಂಖ್ಯೆ:ಡಿಅರ್/ಡಿವಿಜಿ/ಎಲ್ಕ್ಯೂಡಿ/ಸಿಆರ್–08/2009–10, ದಿನಾಂಕ: 25–09–2009 ಮತ್ತು ದಿನಾಂಕ : 13–08–2010

2. ಸಹಕಾರ ಸಂಘಗಳ ಸಹಾಯಕ ನಿಬಂಧಕರು, ದಾವಣಗೆರೆ ಉಪವಿಭಾಗ, ದಾವಣಗೆರೆ ಇವರ ಪತ್ರ ಸಂ: ಸನಿ 31/ಸಮಾಪನೆ/ಎಂಪಿಸಿಎಸ್ ಗಿರಿಯಾಪುರ/ಸಿಆರ್– /2009–10, ದಿನಾಂಕ: 25–06–2011.

**ಪ್ರಸ್ತಾವನೆ:**

ಮೇಲ್ಕಂಡ ವಿಷಯ ಮತ್ತು ಉಲ್ಲೇಖಗಳಿಗೆ ಸಂಬಂಧಿಸಿದಂತೆ, ಈ ಮೇಲ್ಕಂಡ ಸಹಕಾರ ಸಂಘವು ನೋಂದಣಿ ಸಂಖ್ಯೆ:ಎಆರ್–31/ ಆರ್‌ಜಿಎನ್/26103/1999–2000, ದಿನಾಂಕ: 12–07–1999ರಲ್ಲಿ ನೋಂದಣಿಯಾಗಿರುತ್ತದೆ. ಸಂಘದ ಕಾರ್ಯಚಟುವಟಿಕೆಗಳು ಪೂರ್ಣವಾಗಿ ಸ್ಥಗಿತಗೊಂಡಿದ್ದರಿಂದ, ಈ ಸಂಘವನ್ನು ಮುಂದುವರಿಸಿಕೊಂಡು ಹೋಗುವುದು ಸೂಕ್ತವಲ್ಲವೆಂದು ಭಾವಿಸಿ, ಉಲ್ಲೇಖ (1)ರಲ್ಲಿ ಸಹಕಾರ ಸಂಘಗಳ ಉಪ ನಿಬಂಧಕರು, ದಾವಣಗೆರೆ ಜಿಲ್ಲೆ, ದಾವಣಗೆರೆ ಇವರು ದಿನಾಂಕ: 25–09–2009 ರ ಆದೇಶದಲ್ಲಿ ಸಮಾಪನೆಗೊಳಿಸಿ ಸಹಕಾರ ಸಂಘಗಳ ನಿರೀಕ್ಷಕರು, 2ನೇ ವೃತ್ತ, ದಾವಣಗೆರೆ ಇವರನ್ನು ಸಮಾಪನಾಧಿಕಾರಿಯನ್ನಾಗಿ ನೇಮಕ ಮಾಡಲಾಗಿತ್ತು. ನಂತರ ದಿನಾಂಕ: 13–08–2010 ರಂದು ಸಮಾಪನಾಧಿಕಾರಿಗಳನ್ನು ಬದಲಾಯಿಸಿ, ಶ್ರೀ.ಟಿ. ಚನ್ನಬಸಪ್ಪ, ಸ.ಸಂ.ಗಳ ಹಿರಿಯ ನಿರೀಕ್ಷಕರು, ಸಹಕಾರ ಸಂಘಗಳ ಸಹಾಯಕ ನಿಬಂಧಕರ ಕಚೇರಿ,

ಹರಪನಹಳ್ಳಿ ಇವರನ್ನು ಸಮಾಪನಾಧಿಕಾರಿಯನ್ನಾಗಿ ನೇಮಿಸಲಾಗಿದೆ. ಸಮಾಪನಾಧಿಕಾರಿಗಳು ಸಂಘದ ನೋಂದಣಿಯನ್ನು ರದ್ದುಗೊಳಿಸಲು ಉಲ್ಲೇಖ (2)ರ ರೀತ್ಯಾ ಸಹಕಾರ ಸಂಘಗಳ ಸಹಾಯಕ ನಿಬಂಧಕರು, ದಾವಣಗೆರೆ ಇವರ ಮುಖಾಂತರ ಪ್ರಸ್ತಾವನೆ ಸಲ್ಲಿಸಿರುತ್ತಾರೆ. ಈ ಅಂಶಗಳನ್ನು ಪರಿಗಣಿಸಿ ಈ ಕೆಳಕಂಡ ಆದೇಶ ಹೊರಡಿಸಲಾಗಿದೆ.

**ಆದೇಶ**

**ನಂ: ಡಿಆರ್:ಡಿವಿಜಿ:/ನೋಸಂರ/ಸಿಆರ್–08/2009–10, ದಿನಾಂಕ: 30–06–2011**

ಪ್ರಸ್ತಾವನೆಯಲ್ಲಿನ ಅಂಶಗಳನ್ನು ಪರಿಗಣಿಸಿ, ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 75ರನ್ವಯ ಹಾಗೂ ಸರ್ಕಾರದ ಅಧಿಸೂಚನೆ ಸಂ: ಸಿಎಂಡಬ್ಲ್ಯೂ :69: ಸಿಎಲ್ಎಂ:2001 ದಿನಾಂಕ: 21–11–2001ರ ಪ್ರಕಾರ ದತ್ತವಾದ ಅಧಿಕಾರದನ್ವಯ ದಾವಣಗೆರೆ ಜಿಲ್ಲಾ ಸಹಕಾರ ಸಂಘಗಳ ಉಪ ನಿಬಂಧಕರು, ಬಿ. ಕುಬೇರಪ್ಪ, ಕೆ.ಸಿ.ಎಸ್. ಆದ ನಾನು ಸಮಾಪನೆಗೊಂಡ ಹಾಲು ಉತ್ಪಾದಕರ ಮಹಿಳಾ ಸಹಕಾರ ಸಂಘ, ನಿ., ಗಿರಿಯಾಪುರ, ದಾವಣಗೆರೆ ತಾಲ್ಲೂಕು ಇದರ ನೋಂದಣಿಯನ್ನು ರದ್ದುಗೊಳಿಸಿ ಆದೇಶ ಹೊರಡಿಸಿರುತ್ತೇನೆ. ಈ ರದ್ಧತಿಯ ಆದೇಶದ ದಿನಾಂಕದಿಂದ ಸದರಿ ಸಹಕಾರ ಸಂಘದ ಕಾರ್ಯ ಚಟುವಟಿಕೆಗಳು ನಿಂತು ಹೋಗಿರುತ್ತವೆಂದು ಭಾವಿಸಲ್ಪಡತಕ್ಕದ್ದು. ಈ ಸಂಘವು ಅಸ್ತಿತ್ವದಲ್ಲಿರುವುದಿಲ್ಲವೆಂದು ಪರಿಗಣಿಸತಕ್ಕದ್ದು ಹಾಗೂ ಕರ್ನಾಟಕ ಸಹಕಾರ ಸಂಘಗಳ ನಿಯಮಗಳು 1960 ರ ನಿಯಮ 33(ಎನ್) ರನ್ವಯ ಈ ಸಂಘದ ದಾಖಲಾತಿಗಳನ್ನು ಸಹಕಾರ ಸಂಘಗಳ ಸಹಾಯಕ ನಿಬಂಧಕರು, ದಾವಣಗೆರೆ ಇವರ ಕಚೇರಿಯಲ್ಲಿಡಲು ಆದೇಶಿಸಿದೆ.

ನನ್ನ ಸ್ವಸಹಿ ಮತ್ತು ಕಛೇರಿಯ ಮುದ್ರೆಯೊಂದಿಗೆ ಈ ದಿನ ದಿನಾಂಕ: 30–06–2011 ರಂದು ಈ ಆದೇಶವನ್ನು ಹೊರಡಿಸಿರುತ್ತೇನೆ.

ಸಹಕಾರ ಸಂಘಗಳ ಉಪ ನಿಬಂಧಕರು,
ದಾವಣಗೆರೆ ಜಿಲ್ಲೆ, ದಾವಣಗೆರೆ.

**ಪಿ.ಆರ್. 698**

**ಸಹಕಾರ ಇಲಾಖೆ**

**ಸಹಕಾರ ಸಂಘಗಳ ಉಪನಿಬಂಧಕರವರು ದಾವಣಗೆರೆ ಜಿಲ್ಲೆ, ದಾವಣಗೆರೆ ಇವರ ಕಛೇರಿಯ ನಡವಳಿಗಳು**

**ವಿಷಯ:** ಸಮಾಪನೆಗೊಂಡಿರುವ ಹಾಲು ಉತ್ಪಾದಕರ ಸಹಕಾರ ಸಂಘ, ನಿ., ಅಣಬೇರು, ದಾವಣಗೆರೆ ತಾಲ್ಲೂಕು ಇದರ ನೋಂದಣಿಯನ್ನು ರದ್ದು ಪಡಿಸುವ ಕುರಿತು

**ಉಲ್ಲೇಖ:** 1) ಈ ಕಚೇರಿ ಆದೇಶ ಸಂಖ್ಯೆ:ಡಿಆರ್/ಡಿವಿಜಿ/ಎಲ್‌ಕ್ಯೂಡಿ/ಸಿಆರ್–02/2009–10, ದಿನಾಂಕ: 25–09–2009 ಮತ್ತು ದಿನಾಂಕ : 13–08–2010

2) ಸಹಕಾರ ಸಂಘಗಳ ಸಹಾಯಕ ನಿಬಂಧಕರು, ದಾವಣಗೆರೆ ಉಪವಿಭಾಗ, ದಾವಣಗೆರೆ ಇವರ ಪತ್ರ ಸಂ: ಸನಿ 31/ಸಮಾಪನೆ/ಹಾಉಸಸಂನಿ ಅಣಬೇರು/ಸಿಆರ್– /2009–10, ದಿನಾಂಕ: 25–06–2011.

**ಪ್ರಸ್ತಾವನೆ:**

ಮೇಲ್ಕಂಡ ವಿಷಯ ಮತ್ತು ಉಲ್ಲೇಖಗಳಿಗೆ ಸಂಬಂಧಿಸಿದಂತೆ, ಈ ಮೇಲ್ಕಂಡ ಸಹಕಾರ ಸಂಘವು ನೋಂದಣಿ ಸಂಖ್ಯೆ:ಎಆರ್–31/ಆರ್‌ಜಿಎನ್/12265/1985–86, ದಿನಾಂಕ: 04–02–1986ರಲ್ಲಿ ನೋಂದಣಿಯಾಗಿರುತ್ತದೆ. ಸಂಘದ ಕಾರ್ಯಚಟುವಟಿಕೆಗಳು ಪೂರ್ಣವಾಗಿ ಸ್ಥಗಿತಗೊಂಡಿದ್ದರಿಂದ, ಈ ಸಂಘವನ್ನು ಮುಂದುವರಿಸಿಕೊಂಡು ಹೋಗುವುದು ಸೂಕ್ತವಲ್ಲವೆಂದು ಭಾವಿಸಿ, ಉಲ್ಲೇಖ (1)ರಲ್ಲಿ ಸಹಕಾರ ಸಂಘಗಳ ಉಪ ನಿಬಂಧಕರು, ದಾವಣಗೆರೆ ಜಿಲ್ಲೆ, ದಾವಣಗೆರೆ ಇವರು ದಿನಾಂಕ: 25–09–2009 ರ ಆದೇಶದಲ್ಲಿ ಸಮಾಪನೆಗೊಳಿಸಿ ಸಹಕಾರ ಸಂಘಗಳ ನಿರೀಕ್ಷಕರು, 2ನೇ ವೃತ್ತ, ದಾವಣಗೆರೆ ಇವರನ್ನು ಸಮಾಪನಾಧಿಕಾರಿಯನ್ನಾಗಿ ನೇಮಕ ಮಾಡಲಾಗಿತ್ತು. ನಂತರ ದಿನಾಂಕ: 13–08–2010 ರಂದು ಸಮಾಪನಾಧಿಕಾರಿಗಳನ್ನು ಬದಲಾಯಿಸಿ, ಶ್ರೀ.ಟಿ. ಚನ್ನಬಸಪ್ಪ, ಸ.ಸಂ.ಗಳ ಹಿರಿಯ ನಿರೀಕ್ಷಕರು, ಸಹಕಾರ ಸಂಘಗಳ ಸಹಾಯಕ ನಿಬಂಧಕರ ಕಚೇರಿ, ಹರಪನಹಳ್ಳಿ ಇವರನ್ನು ಸಮಾಪನಾಧಿಕಾರಿಯನ್ನಾಗಿ ನೇಮಿಸಲಾಗಿದೆ. ಸಮಾಪನಾಧಿಕಾರಿಗಳು ಸಂಘದ ನೋಂದಣಿಯನ್ನು ರದ್ದುಗೊಳಿಸಲು ಉಲ್ಲೇಖ (2)ರ ರೀತ್ಯಾ ಸಹಕಾರ ಸಂಘಗಳ ಸಹಾಯಕ ನಿಬಂಧಕರು, ದಾವಣಗೆರೆ ಇವರ ಮುಖಾಂತರ ಪ್ರಸ್ತಾವನೆ ಸಲ್ಲಿಸಿರುತ್ತಾರೆ. ಈ ಅಂಶಗಳನ್ನು ಪರಿಗಣಿಸಿ ಈ ಕೆಳಕಂಡ ಆದೇಶ ಹೊರಡಿಸಲಾಗಿದೆ.

**ಆದೇಶ**

**ನಂ: ಡಿಆರ್:ಡಿವಿಜಿ:/ನೋಸಂರ/ಸಿಆರ್–02/2009–10, ದಿನಾಂಕ: 30–06–2011**

ಪ್ರಸ್ತಾವನೆಯಲ್ಲಿನ ಅಂಶಗಳನ್ನು ಪರಿಗಣಿಸಿ, ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 75ರನ್ವಯ ಹಾಗೂ ಸರ್ಕಾರದ ಅಧಿಸೂಚನೆ ಸಂ: ಸಿಎಂಡಬ್ಲ್ಯೂ :69: ಸಿಎಲ್ಎಂ:2001 ದಿನಾಂಕ: 21–11–2001ರ ಪ್ರಕಾರ ದತ್ತವಾದ ಅಧಿಕಾರದನ್ವಯ ದಾವಣಗೆರೆ ಜಿಲ್ಲಾ ಸಹಕಾರ ಸಂಘಗಳ ಉಪ ನಿಬಂಧಕರು, ಬಿ. ಕುಬೇರಪ್ಪ, ಕೆ.ಸಿ.ಎಸ್. ಆದ ನಾನು ಸಮಾಪನೆಗೊಂಡ ಹಾಲು ಉತ್ಪಾದಕರ ಸಹಕಾರ ಸಂಘ, ನಿ., ಅಣಬೇರು, ದಾವಣಗೆರೆ ತಾಲ್ಲೂಕು ಇದರ ನೋಂದಣಿಯನ್ನು ರದ್ದುಗೊಳಿಸಿ ಆದೇಶ ಹೊರಡಿಸಿರುತ್ತೇನೆ. ಈ ರದ್ಧತಿಯ ಆದೇಶದ ದಿನಾಂಕದಿಂದ ಸದರಿ ಸಹಕಾರ ಸಂಘದ ಕಾರ್ಯ ಚಟುವಟಿಕೆಗಳು ನಿಂತು ಹೋಗಿರುತ್ತವೆಂದು ಭಾವಿಸಲ್ಪಡತಕ್ಕದ್ದು. ಈ ಸಂಘವು ಅಸ್ತಿತ್ವದಲ್ಲಿರುವುದಿಲ್ಲವೆಂದು ಪರಿಗಣಿಸತಕ್ಕದ್ದು ಹಾಗೂ

ಕರ್ನಾಟಕ ಸಹಕಾರ ಸಂಘಗಳ ನಿಯಮಗಳು 1960 ರ ನಿಯಮ 33(ಎನ್) ರನ್ವಯ ಈ ಸಂಘದ ದಾಖಲಾತಿಗಳನ್ನು ಸಹಕಾರ ಸಂಘಗಳ ಸಹಾಯಕ ನಿಬಂಧಕರು, ದಾವಣಗೆರೆ ಇವರ ಕಚೇರಿಯಲ್ಲಿಡಲು ಆದೇಶಿಸಿದೆ.

ನನ್ನ ಸ್ವಸಹಿ ಮತ್ತು ಕಛೇರಿಯ ಮುದ್ರೆಯೊಂದಿಗೆ ಈ ದಿನ ದಿನಾಂಕ: 30–06–2011 ರಂದು ಈ ಆದೇಶವನ್ನು ಹೊರಡಿಸಿರುತ್ತೇನೆ.

ಸಹಕಾರ ಸಂಘಗಳ ಉಪ ನಿಬಂಧಕರು,
ದಾವಣಗೆರೆ ಜಿಲ್ಲೆ, ದಾವಣಗೆರೆ.

**ಪಿ.ಆರ್. 699**

**COMMERCIAL TAXES DEPARTMENT**

**PROCEEDINGS OF THE COMMISSIONER OF COMMERCIAL TAXES, (KARNATAKA), BANGALORE- CLARIFICATION UNDER SECTION 59(4) OF THE KARNATAKA VALUE ADDED TAX ACT, 2003.**

**Sub :** KVAT Act, 2003 - Clarification under Section 59(4) regarding the rate of tax applicable on certain commodities- reg.,

**Ref :** Application dated:01.03.2011 of Sri Abhilish Nair, Chairman & Managing Director, Zeus Biotech Limited, Plot No.18 & 19, Belagola Food Industrial Area, Metagalli, Mysore-570 016.

* * * *

In the application cited above, Sri Abhilish Nair, Chairman & Managing Director, Zeus Biotech Limited, Bangalore, has sought clarification regarding the rate of tax applicable on certain commodities.

2. Section 59(4) of the Karnataka Value Added Tax Act, 2003 empowers the Commissioner of Commercial Taxes to clarify the rate of tax payable under the Act, if he considers it necessary or expedient so to do, for the purpose of maintaining uniformity in the work of assessments and collection of revenue. It is examined and found that the clarification requested by the petitioner is within the scope of the aforesaid provision and it is necessary that the clarification ,be issued for the purpose of maintaining uniformity in the work of assessments and collection of revenue.

3. Hence the following clarification is issued.

**CLARIFICATION NO.CLR.CR.172/10-11, DATED 23-05-2011**

It is hereby clarified that the rates of tax applicable on the following goods are as indicated under :

| Sl. No. | Goods | Rate of tax/Section |
|---|---|---|
| 1. | Selenosac-E | 13.5% upto 31.03.2011 and 14% from 01.04.2011 under Section 4(1) (b) of the KV AT Act 2003 |
| 2. | Equiton | |
| 3. | Zymosac | |
| 4. | Digimax | |
| 5. | Chromisac-GTF | |

**PRADEEP SINGH KHAROLA**
Commissioner of Commercial Taxes, (Karnataka), Bangalore

**PR-751**

**COMMERCIAL TAXES DEPARTMENT**

**PROCEEDINGS OF THE COMMISSIONER OF COMMERCIAL TAXES, (KARNATAKA), BANGALORE- CLARIFICATION UNDER SECTION 59(4) OF THE KARNATAKA VALUE ADDED TAX ACT, 2003.**

**Sub :** KVAT Act, 2003 - Clarification under Section 59(4) regarding the rate of tax applicable on 'pure instant coffee powder and instant coffee powder mixed with chicory' -reg.,

**Ref :** Application dated: 11.04.2011 of the General Manager,SLN Coffee (P) Ltd., PB No.47, KIADB Industrial Area, Kudhur, Kushalnagar-571 234.TIN:29060483136

* * *

The registered dealer under the Act, SLN Coffee (P) Ltd., Kushalnagar. has sought clarification regarding the rate of tax applicable on 'pure instant coffee powder and 'instant coffee powder mixed with chicory'.

2. Section 59(4) of the Kamataka Value Added Tax Act, 2003 empowers the Commissioner of Commercial Taxes to clarify the rate of tax payable under the Act. if he considers it necessary or expedient so to do, for the purpose of maintaining uniformity in the work of assessments and collection of revenue. The issue was examined and found that the clarification requested by the petitioner is within the scope of the aforesaid provision and it is necessary that the clarification be issued for the purpose of maintaining uniformity in the work of assessments and collection of revenue.

3. Hence the following clarification is issued.

**CLARIFICATION NO.CLR.CR.21/11-12, DATED 07-07-2011**

It is clarified that 'instant pure coffee powder' and 'instant coffee powder mixed with chicory powder' are liable to tax at 5% from 01.04.2010 as per entry 9 in the Notification No.FD 82 CSL 2010 (Ill), dated:31.03.2010.

**PRADEEP SINGH KHAROLA**
Commissioner of Commercial Taxes,
(Karnataka), Bangalore

PR-752

**COMMERCIAL TAXES DEPARTMENT**

**PROCEEDINGS OF THE COMMISSIONER OF COMMERCIAL TAXES, (KARNATAKA), BANGALORE- CLARIFICATION UNDER SECTION 59(4) OF THE KARNATAKA VALUE ADDED TAX ACT, 2003.**

**Sub :** KVAT Act, 2003 - Clarification under Section 59(4) regarding the rate of tax applicable on 'electric bicycle' .

**Ref :** Application dated 19.04.2011 of Sri Srinivas T.L. Business Manager, Mindtech Engineering Systems LLP, #7, 2nd Main,. Industrial Lane, Magadi Main Road, Kamakshipalya, Bangalore-560 079.

In the application cited. above, Registered dealer, Sri Srinivas T.L.Business Manager, Mindtech Engineering Systems LLP, has sought clarification regarding the rate of tax applicable on 'electric bicycle'.

2. Section 59(4) of the Karnataka Value Added Tax Act, 2003 empowers the Commissioner of Commercial Taxes to clarify the rate cf tax payable under the Act, if he considers it necessary or expedient so to do, for the purpose of maintaining uniformity in the work of assessments and collection of revenue. It is examined and found that the clarification requested by the petitioner is within the scope of the aforesaid provision and it is necessary that the clarification be issued for the purpose of maintaining uniformity in the work of assessments and collection of revenue.

3. Hence the following clarification is issued.

**CLARIFICATION NO.CLR.CR.23/11-12, DATED 10.06.2011**

It is clarified that' electric bicycle' which is a driven by electrical energy supplied by the battery to the small motor is liable to tax at 5%. under entry 13 of the Third Schedule to the KVAT Act, 2003.

**PRADEEP SINGH KHAROLA**
Commissioner of Commercial Taxes,
(Karnataka), Bangalore

PR-753

## ಸಹಕಾರ ಇಲಾಖೆ
## ಸಹಕಾರ ಸಂಘಗಳ ಸಹಾಯಕ ನಿಬಂಧಕರ ಕಛೇರಿ, ತುಮಕೂರು ಉಪವಿಭಾಗ, ತುಮಕೂರು
## ಹಾಗೂ ವಸೂಲಾತಿ ಅಧಿಕಾರಿಗಳ ನಡವಳಿಕೆಗಳು

**ವಿಷಯ :–** ಅಮಲ್ಜಾರಿ ಸಂಖ್ಯೆ ಸಿ.ಇ.ಪಿ. 227/2008–09, ಶ್ರೀ ಹೆಚ್. ಬಾಲಕೃಷ್ಣಯ್ಯ ಬಿನ್ ಹನುಮಪ್ಪ, ಲಿಂಗಾಪುರ, ತುಮಕೂರು ಇವರ ಸ್ಥಿರಾಸ್ತಿಯನ್ನು ಶ್ರೀ ಮಾರುತಿ ಗೃಹ ನಿರ್ಮಾಣ ಸಹಕಾರ ಸಂಘ ನಿ., ತುಮಕೂರು ಇದರ ಹೆಸರಿಗೆ ವರ್ಗಾಯಿಸಿ ಸ್ಥಿರೀಕರಣ ಆದೇಶ ನೀಡುವ ಬಗ್ಗೆ

**ಉಲ್ಲೇಖ :–** 1. ಮಾರಾಟಾಧಿಕಾರಿಗಳು, ಶ್ರೀ ಮಾರುತಿ ಗೃಹ ನಿರ್ಮಾಣ ಸಹಕಾರ ಸಂಘ ನಿ., ತುಮಕೂರು, ಇವರ ಪತ್ರ ಸಂಖ್ಯೆ ದಿನಾಂಕ : 14–06–2011

2. ಈ ಕಛೇರಿಯಿಂದ ನೀಡಲಾದ ನೋಟೀಸು ಸಂಖ್ಯೆ ದಿನಾಂಕ : 20–06–2011

**ಪ್ರಸ್ತಾವನೆ :**

ಶ್ರೀ ಮಾರುತಿ ಗೃಹ ನಿರ್ಮಾಣ ಸಹಕಾರ ಸಂಘ ನಿ., ತುಮಕೂರು ಈ ಸಹಕಾರ ಸಂಘವು ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959 ಮತ್ತು ನಿಯಮ 1960 ರನ್ವಯ ನೋಂದಾಯಿತವಾಗಿರುತ್ತದೆ, ಮತ್ತು ನೋಂದಾಯಿತವಾದ ಉಪನಿಯಮದನ್ವಯ ಕಾರ್ಯನಿರ್ವಹಿಸುತ್ತಿದೆ.

ಈ ಸಹಕಾರ ಸಂಘದಲ್ಲಿ ಶ್ರೀ ಹೆಚ್. ಬಾಲಕೃಷ್ಣಯ್ಯ ಬಿನ್ ಹನುಮಪ್ಪ, ಲಿಂಗಾಪುರ, ತುಮಕೂರು ರವರು ಗೃಹ ನಿರ್ಮಾಣ ಸಾಲ ಪಡೆದಿದ್ದು, ಸಾಲದ ಹಣವನ್ನು ಕರಾರು ರೀತ್ಯಾ ಮರು ಪಾವತಿಸದೆ ಸುಸ್ತಿಯಾಗಿರುತ್ತದೆ. ಸುಸ್ತಿ ಸಾಲದ ಹಣದ ವಸೂಲಾತಿಗಾಗಿ ಸಂಘವು ಸಹಕಾರ ಸಂಘಗಳ ಸಹಾಯಕ ನಿಬಂಧಕರು ತುಮಕೂರು ಇವರ ಕಛೇರಿಯಲ್ಲಿ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959 ರ ಕಲಂ 70 ರ ಅಡಿಯಲ್ಲಿ ದಾವೆಯನ್ನು ಹೂಡಿದ್ದು, ಈ ದಾವೆ ಸಂ. 33/2008–09, ತೀರ್ಪಿನ ದಿನಾಂಕ 18–10–2010 ರಂದು ಡಿಕ್ರಿಯಾಗಿದ್ದು ಸದರಿ ಡಿಕ್ರಿ ಅನುಸಾರ ಅಮಲ್ಜಾರಿ ಸಂಖ್ಯೆ ಸಿ.ಇ.ಪಿ. ನಂ. 227/2008–09 ಪಡೆಯಲಾಗಿದೆ.

ತೀರ್ಪಿನ ನಂತರವೂ ಸಹ ಡಿಕ್ರಿಯಾದ ಬಾಕಿ ಹಣವನ್ನು ಸಂಘಕ್ಕೆ ಜಮಾ ಆಗದೇ ಸುಸ್ತಿದಾರರಾದ ಕಾರಣದಿಂದ ಡಿಕ್ರಿಯನ್ನು ವಸೂಲಿ ಕ್ರಮಕ್ಕಾಗಿ ಅಮಲ್ಜಾರಿ ಸಂಖ್ಯೆ ಸಿ.ಇ.ಪಿ. ನಂ. 227/2008–09 ರನ್ವಯ ಮಾರಾಟಾಧಿಕಾರಿಯವರ ವಶಕ್ಕೆ ನೀಡಲಾಗಿತ್ತು. ಮಾರಾಟಾಧಿಕಾರಿಗಳು ವಸೂಲಿ ಕ್ರಮ ನಡೆಸಿ ಡಿಕ್ರಿ ಬಾಕಿದಾರರ ಸ್ಥಿರಾಸ್ತಿಯನ್ನು ದಿನಾಂಕ 13–05–2011 ರಂದು ಮಾರಾಟ ಮಾಡಲು ದಿನಾಂಕ ನಿಗದಿ ಪಡಿಸಿರುತ್ತಾರೆ. ಈ ದಿನಾಂಕಕ್ಕೆ ಸುಸ್ತಿ ಸಾಲಗಾರರಿಂದ ಒಟ್ಟು ರೂ. 4,96,718–00 ಮತ್ತು ಬಡ್ಡಿ ಇತರೆ ಖರ್ಚುಗಳು ಬಾಕಿ ಇರುವುದಾಗಿ ಮಾರಾಟಾಧಿಕಾರಿಗಳ ಪತ್ರದಿಂದ ಕಂಡುಬಂದಿರುತ್ತದೆ. ಸದರಿ ದಿನದಂದು ನಡೆಸಿದ ಬಹಿರಂಗ ಹರಾಜಿಗೆ ಬಿಡ್ಡುದಾರರು ಯಾರು ಬಾರದಿದ್ದರಿಂದ ಸಹಕಾರ ಸಂಘಗಳ ನಿಯಮ 38–ಎ ರನ್ವಯ ಡಿಕ್ರಿ ಹೋಲ್ಡರ್ ಆದ ಶ್ರೀ ಮಾರುತಿ ಗೃಹ ನಿರ್ಮಾಣ ಸಹಕಾರ ಸಂಘ ನಿ., ತುಮಕೂರು ಇವರ ಹೆಸರಿಗೆ ಸಾಲಗಾರರ ಸ್ಥಿರಾಸ್ತಿಯನ್ನು ವರ್ಗಾವಣೆ ಮಾಡಿ ಖಾಯಂಗೊಳಿಸಲು ಉಲ್ಲೇಖ (1)ರ ರೀತ್ಯಾ ಮಾರಾಟಾಧಿಕಾರಿಗಳು ಕೋರಿರುತ್ತಾರೆ.

ಈ ಕುರಿತು ಈ ಕಛೇರಿಯಿಂದ ಉಲ್ಲೇಖ (2) 20–06–2011 ರ ರೀತ್ಯಾ ಕರ್ನಾಟಕ ಸಹಕಾರ ಸಂಘಗಳ ನಿಯಮ 1960 ರ ನಿಯಮ 38(ಎ) 3ರ ಪ್ರಕಾರ ಸುಸ್ತಿ ಸಾಲಗಾರರಾದ ಶ್ರೀ ಹೆಚ್. ಬಾಲಕೃಷ್ಣಯ್ಯ ಬಿನ್ ಹನುಮಪ್ಪನವರಿಗೆ ನೋಟೀಸು ನೀಡಿ ಈ ನೋಟಿಸು ತಲುಪಿದ ಒಂದು ತಿಂಗಳೊಳಗೆ ನಿಮ್ಮಿಂದ ಸಂಘಕ್ಕೆ ಬರಬೇಕಾದ ಮೊತ್ತ ರೂ. 4,96,718–00ಗಳು ದಿನಾಂಕ 13–05–2011 ಕ್ಕೆ ಇದ್ದಂತೆ ಮತ್ತು ನಂತರ ಅದರ ಮೇಲಿನ ಬಡ್ಡಿ ಹಾಗೂ ಇತರೆ ವೆಚ್ಚಗಳನ್ನು ಸದರಿ ಸಂಘಕ್ಕೆ ಪಾವತಿಸಿ ರಸೀತಿ ಪಡೆದುಕೊಳ್ಳಲು ಅಂತಿಮವಾಗಿ ಸೂಚಿಸಲಾಗಿತ್ತು ಮತ್ತು ಪಾವತಿಸಲು ತಪ್ಪಿದಲ್ಲಿ ಬಹಿರಂಗ ಹರಾಜಿಗೆ ಒಳಪಡಿಸಲಾದ, ನೀವು ಸಂಘಕ್ಕೆ ಆಧಾರ ಮಾಡಿರುವ ಸ್ಥಿರಾಸ್ತಿಯನ್ನು ಶ್ರೀ ಮಾರುತಿ ಗೃಹ ನಿರ್ಮಾಣ ಸಹಕಾರ ಸಂಘ ನಿ., ತುಮಕೂರು ಇದರ ಹೆಸರಿಗೆ ಕಾನೂನು ಪ್ರಕಾರ ವರ್ಗಾಯಿಸಲಾಗುವುದೆಂದು ಸಹ ತಿಳಿಸಲಾಗಿದ್ದು, ಸದರಿ ನೋಟಿಸನ್ನು ಅಂಚೆ ನೋಂದಣಿ ಪತ್ರದ ಮೂಲಕ ಡಿಕ್ರಿ ಹೋಲ್ಡರ್ ವಿಳಾಸಕ್ಕೆ ಕಳುಹಿಸಿದ್ದು, ನೋಂದಣಿ ಪತ್ರವು ಬಟವಾಡೆಯಾಗದೆ ವಿಳಾಸದಾರರು, ಯಾರು ಇಲ್ಲವೆಂದು ಬರೆದ ಷರಾದೊಂದಿಗೆ ಅಂಚೆ ಹಿಂತಿರುಗಿ ಬಂದಿರುತ್ತದೆ. ಆದರೂ ನೋಟಿಸು ನೀಡಿದ 30 ದಿನಗಳವರೆಗೂ ಕಾದಿದ್ದು, ಸುಸ್ತಿ ಸಾಲಗಾರರು ಹಣವನ್ನು ಸಂಘಕ್ಕೆ ಪಾವತಿಸಿರುವುದಿಲ್ಲ ಮತ್ತು ಈ ಬಗ್ಗೆ ಆಕ್ಷೇಪಣೆಗಳನ್ನು ಸಹ ಕಛೇರಿಗೆ ಸಲ್ಲಿಸಿರುವುದಿಲ್ಲ.

ಆದ್ದರಿಂದ ಈ ಕೆಳಕಂಡ ಡಿಕ್ರಿ ಬಾಕಿದಾರರ ಸ್ಥಿರ ಸ್ವತ್ತುಗಳನ್ನು, ಡಿಕ್ರಿಹೊಂದಿದ ಶ್ರೀ ಮಾರುತಿ ಗೃಹ ನಿರ್ಮಾಣ ಸಹಕಾರ ಸಂಘ ನಿ., ತುಮಕೂರು ಇವರ ಹೆಸರಿಗೆ ಸ್ಥಿರೀಕರಣಗೊಳಿಸಿ ವರ್ಗಾವಣೆ ಮಾಡಲು ಆದೇಶ ನೀಡಲಾಗಿದೆ.

### ಆದೇಶ

**ಸಂಖ್ಯೆ : ಸನಿ–32/ದಾವಾ/ಮಾ.ಸ್ಥಿ/19/2011–12, ದಿನಾಂಕ : 23–07–2011**

ಕೆ. ಗೋಪಾಲರೆಡ್ಡಿ, ಸಹಕಾರ ಸಂಘಗಳ ಸಹಾಯಕ ನಿಬಂಧಕರು, ತುಮಕೂರು ಉಪವಿಭಾಗ, ತುಮಕೂರು ಆದ ನಾನು ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959 ರ ಕಲಂ 101(ಬಿ) ಅನ್ವಯ ಹಾಗೂ ಕರ್ನಾಟಕ ಸರ್ಕಾರದ ಅಧಿಸೂಚನೆ ಸಂಖ್ಯೆ ಸಿಓ.ಸಿಎಲ್ಎಮ್, 139/2010 ದಿನಾಂಕ 17–02–2011 ರ ರೀತ್ಯಾ ಪ್ರತ್ಯಾಯೋಜಿಸಲ್ಪಟ್ಟ ಅಧಿಕಾರವನ್ನು ಚಲಾಯಿಸುತ್ತಾ ಶ್ರೀ ಹೆಚ್. ಬಾಲಕೃಷ್ಣಯ್ಯ ಬಿನ್ ಹನುಮಪ್ಪ, ಲಿಂಗಾಪುರ, ತುಮಕೂರು ಇವರ ಸ್ಥಿರಾಸ್ತಿಯನ್ನು ಶ್ರೀ ಮಾರುತಿ ಗೃಹ ನಿರ್ಮಾಣ ಸಹಕಾರ ಸಂಘ ನಿ., ತುಮಕೂರು ಈ ಸಹಕಾರ ಸಂಘದ ಹೆಸರಿಗೆ ಸ್ಥಿರೀಕರಣಗೊಳಿಸಿ, ವರ್ಗಾವಣೆ ಮಾಡಿ ಆದೇಶ ನೀಡಿರುತ್ತೇನೆ. ಮತ್ತು ಈ ಆದೇಶಕ್ಕೆ ಲಗತ್ತಿಸಿರುವ ಸಹಕಾರ ಸಂಘಗಳ ಕಾಯ್ದೆ ನಿಯಮ 38ಎ 5ರಲ್ಲಿ

